ಬಸವಪ್ಪಶಾಸ್ತ್ರಿ ಗ್ರಂಥಮಾಲಾ—ಪ್ರಥಮಪುಷ್ಪ

# KARNATAKA SAKUNTALA NATAKAM

# ಕರ್ಣಾಟಕ ಶಾಕುಂತಲ ನಾಟಕಂ

ಮೈಸೂರು ಶ್ರೀಮನ್ಮಹಾರಾಜರವರ ಆಸ್ಥಾನ ಕವಿಗಳಾಗಿದ್ದ
**ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಗಳಿಂದ**
ರಚಿಸಲ್ಪಟ್ಟುದು



ಮೈಸೂರು
ವೆಸ್ಲಿ ಪ್ರೆಸ್ ಮತ್ತು ಪಬ್ಲಿಷಿಂಗ್ ಹೌಸ್
೧೯೪೩



ಬೆಲೆ: ರೂ. ೧—೮—೦

# KARNATAKA SAKUNTALA NATAKAM

---

# ಕರ್ಣಾಟಕ ಶಾಕುಂತಲ ನಾಟಕಂ


ಮೈಸೂರು ಶ್ರೀಮನ್ ಮಹಾರಾಜರವರ ಆಸ್ಥಾನಕವಿಗಳಾಗಿದ್ದ

**ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಗಳಿಂದ**

ರಚಿಸಲ್ಪಟ್ಟದು



MYSORE:

THE WESLEY PRESS AND PUBLISHING HOUSE

1942





ಬೆಲೆ : ರೂ. ೧—೮—೦

# ಆರನೆಯ ಮುದ್ರಣದ ಪೀಠಿಕೆ

---

ಕರ್ಣಾಟಕ ಶಾಕುಂತಲ ನಾಟಕದ ಐದನೆಯ ಮುದ್ರಣದ ಪ್ರತಿಗಳೆಲ್ಲವೂ ಮುಗಿದುಹೋದುವು. ಈ ಗ್ರಂಥವನ್ನು ಈ ಸಾರಿ ಮೈಸೂರು ವಿಶ್ವವಿದ್ಯಾನಿಲಯದವರು ಬಿ. ಎ. ಪರೀಕ್ಷೆಗೆ ಪಠ್ಯಪುಸ್ತಕವನ್ನಾಗಿ ಇಟ್ಟಿರುವುದರಿಂದ ಇದರ ಪ್ರತಿಗಳನ್ನು ಕೂಡಲೆ ವಿದ್ಯಾರ್ಥಿಗಳಿಗೆ ಒದಗಿಸಿಕೊಡಬೇಕೆಂದು ಈ ಆರನೆಯ ಮುದ್ರಣವನ್ನು ಮಾಡಿಸಿರುವೆನು. ಐದನೆಯ ಮುದ್ರಣದಲ್ಲಿದ್ದ ಅಕ್ಷರ ಸ್ಖಾಲಿತ್ಯಾದಿ ದೋಷಗಳನ್ನು ಇದರಲ್ಲಿ ಬಹುಮಟ್ಟಿಗೆ ತಿದ್ದಿ ಸರಿಪಡಿಸಿದೆ. ಪ್ರಮಾದವಶದಿಂದ ಇನ್ನೂ ಏನಾದರೂ ತಪ್ಪುಗಳಿದ್ದಲ್ಲಿ ಗುಣಜ್ಞರಾದ ವಿದ್ವಾಂಸರು ತಿಳಿಯಪಡಿಸಿದರೆ ಕೃತಜ್ಞತೆಯಿಂದ ಮುಂದಣ ಮುದ್ರಣದಲ್ಲಿ ಅವುಗಳನ್ನು ಸರಿಪಡಿಸುವೆನು.

ಈಗ ನಡೆಯುತ್ತಿರುವ ಯೂರೋಪಿನ ಘೋರಯುದ್ಧದ ನಿಮಿತ್ತವಾಗಿ ಕಾಗದದ ಬೆಲೆಯು ಏರಿದ್ದರೂ ವಿದ್ಯಾರ್ಥಿಗಳ ಸೌಕರ್ಯಕ್ಕಾಗಿ ಮೊದಲಿದ್ದ ಬೆಲೆಯನ್ನೇ ಇಟ್ಟಿದೆ.

ಮೈಸೂರು,
ಜೂನ್, 1942.

ಗ್ರಂಥಕರ್ತರ ಪೌತ್ರ,
**ಎಂ. ಮಹಾದೇವಶಾಸ್ತ್ರಿ.**

---

ಸೂಚನೆ—ಓದುವವರು ಕೆಳಗಡೆ ಗೀಟುಹಾಕಿ ಸಣ್ಣ ಅಕ್ಷರದಲ್ಲಿ ಮುದ್ರಿತವಾಗಿರುವ ಹಾಡುಗಳನ್ನು ಬಿಟ್ಟು ಓದಿಕೊಳ್ಳತಕ್ಕದ್ದು. ನಾಟಕದವರು (*) ಈ ಮೊದಲಾದ ಗುರುತು ಹಾಕಿರುವ ಪದ್ಯಗಳನ್ನು ಬಿಟ್ಟು ಅವಕ್ಕೆ ಪ್ರತಿಯಾಗಿ ಕೆಳಗಡೆ ಸಣ್ಣಕ್ಷರದ ಅದೇ ಗುರುತಿನ ಹಾಡುಗಳನ್ನು ಉಪಯೋಗಿಸಿಕೊಳ್ಳತಕ್ಕದ್ದು.

# ಐದನೆಯ ಮುದ್ರಣದ ಪೀಠಿಕೆ

ಶ್ರೀಮನ್ಮಹಾರಾಜ ಲೇಟ್ ಶ್ರೀ ಚಾಮರಾಜ ಒಡೆಯರ್ ಬಹದ್ದೂರ್‌ರವರ ಆಸ್ಥಾನ ಕವಿಗಳಾದ ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಗಳಿಂದ ರಚಿತವಾದ ಕರ್ಣಾಟಕ ಶಾಕುಂತಲ ನಾಟಕದ ನಾಲ್ಕನೆಯ ಮುದ್ರಣದ ಪುಸ್ತಕಗಳೆಲ್ಲವೂ ಮುಗಿದು ಹೋದುವು. ಈ ಗ್ರಂಥವನ್ನು ಈ ಸಾರಿ ಮೈಸೂರು ಮತ್ತು ಮದರಾಸು ವಿಶ್ವವಿದ್ಯಾನಿಲಯದವರು ಬಿ.ಎ. ಪರೀಕ್ಷೆಗೆ ಪಠ್ಯಪುಸ್ತಕವನ್ನಾಗಿ ಇಟ್ಟಿರುವುದರಿಂದ ಇದರ ಪ್ರತಿಗಳನ್ನು ತತ್‌ಕ್ಷಣವೇ ವಿದ್ಯಾರ್ಥಿಗಳಿಗೆ ಒದಗಿಸಿಕೊಡಬೇಕೆಂದು ಮದರಾಸು ಗೌರ್ನಮೆಂಟ್ ಸೀನಿಯರ್ ಟ್ರಾನ್ಸ್‌ಲೇಟರಾಗಿದ್ದು ಈಗ ಕನ್ನಡ ಬೋರ್ಡ್ ಆಫ್ ಸ್ಟಡೀಸಿನ ಛೇರ್‌ಮೇನ್‌ರಾಗಿರುವ ಮ|| ರಾ|| ಗಳಾದ ಬಿ. ರಾಮ ರಾವ್, ಎಂ.ಎ., ಎಲ್.ಎಲ್.ಬಿ. ಯವರು ನನ್ನನ್ನು ಪ್ರೋತ್ಸಾಹಗೊಳಿಸಿದ್ದರಿಂದ ಅವರಿಗೆ ನಾನು ಕೇವಲ ಕೃತಜ್ಞನಾಗಿ ಈ ಐದನೆಯ ಮುದ್ರಣವನ್ನು ಪೂರ್ತಿಗೊಳಿಸಿದೆನು. ಹಿಂದಿನ ನಾಲ್ಕನೆಯ ಮುದ್ರಣದಲ್ಲಿದ್ದ ಅಕ್ಷರಸ್ಖಾಲಿತ್ಯಾದಿ ದೋಷಗಳನ್ನು ಸರಿಪಡಿಸಿರುತ್ತೇನೆ. ಪ್ರಮಾದವಶದಿಂದುಂಟಾಗಿರುವ ದೋಷಗಳಿದ್ದಲ್ಲಿ ಗುಣಜ್ಞರಾದ ವಿದ್ವಾಂಸರು ತಿಳಿಯಪಡಿಸಿದರೆ ಕೃತಜ್ಞತೆಯಿಂದ ಮುಂದಣ ಮುದ್ರಣದಲ್ಲಿ ಸರಿಪಡಿಸುವೆನು.

ಮೈಸೂರು,<br>ಅಕ್ಟೋಬರ್, *1932.*

ಗ್ರಂಥಕರ್ತರ ಪುತ್ರ,<br>**ಬಿ. ಮಹಾದೇವಶಾಸ್ತ್ರಿ.**

# ನಾಲ್ಕನೆಯ ಮುದ್ರಣದ ಪೀಠಿಕೆ

ಶ್ರೀಮನ್ಮಹಾರಾಜ ಲೇಟ್ ಶ್ರೀ ಚಾಮರಾಜ ಒಡೆಯರ್ ಬಹದ್ದೂರ್‌ರವರ ಆಸ್ಥಾನಕವಿಗಳಾದ ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಗಳವರಿಂದ ರಚಿತವಾದ ಶಾಕುಂತಳ ನಾಟಕದ ಮೂರನೆಯ ಮುದ್ರಣದ ಪುಸ್ತಕಗಳೆಲ್ಲವೂ ಮುಗಿದು ಹೋಗಿದ್ದುವು. ಅನೇಕರು ಈ ಗ್ರಂಥದ ಪ್ರತಿಗಳನ್ನು ಅಪೇಕ್ಷಿಸುತ್ತಿದ್ದಾಗ್ಯೂ ಮುದ್ರಣಮಾಡಿಸುವುದಕ್ಕೆ ದ್ರವ್ಯಾನುಕೂಲವಿಲ್ಲದೆ ಇದ್ದುದರಿಂದ ಘನವಸ್ನು ಹೊಂದಿದ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳನ್ನು ನಾನು ಪ್ರಾರ್ಥಿಸಿ ಕೊಳ್ಳಲಾಗಿ ಅವರು ದಯೆಯಿಟ್ಟು ಮುದ್ರಣಕ್ಕೆ ತಗಲುವ ವೆಚ್ಚದಲ್ಲಿ ಅರ್ಧಭಾಗವನ್ನು ಉಚಿತವಾಗಿ ಕೊಡುವೆವೆಂದು ಅಪ್ಪಣೆಕೊಟ್ಟುದರಿಂದ ಈಗ ನಾಲ್ಕನೆಯ ಮುದ್ರಣವಂ ಪೂರ್ತಿಮಾಡಿದುದಾಯಿತು.

ಹೀಗೆ ಗ್ರಂಥಪ್ರಚಾರಕ್ಕೆ ಅವಕಾಶವುಂಟಾಗುವಂತೆ ಧನಸಹಾಯವನ್ನು ಮಾಡಿದ ದಯಾಳುಗಳೂ ಗುಣಜ್ಞರೂ ಆದ ವೈಸ್‌ಛಾನ್ಸಲರ್ ಡಾ|| ವ್ರಜೇಂದ್ರನಾಥಶೀಲ್, ಬಿ.ಎ., ಪಿ.ಎಚ್‌ಡಿ., ಯವರಿಗೂ ಮ|| ರಾ|| ರಿಜಿಸ್ಟ್ರಾರ್ ಸುಬ್ರಹ್ಮಣ್ಯೈಯ್ಯರ್, ಬಿ.ಎ., ಯವರಿಗೂ ತುಂಬಾ ಕೃತಜ್ಞನಾಗಿರುತ್ತೇನೆ.

ಮೂರನೆಯ ಮುದ್ರಣದಲ್ಲಿ ಉಂಟಾಗಿದ್ದ ಅಕ್ಷರಸ್ಖಾಲಿತ್ಯಾದಿ ದೋಷಗಳನ್ನು ಸರಿಪಡಿಸಿ ಸಂಶಯ ಬಂದ ಸ್ಥಳಗಳಲ್ಲಿ ಪಾಠಾಂತರಗಳಂ ತೋರಿಸಿ ಪರಿಷ್ಕರಿಸಿದ ಆಸ್ಥಾನ ಮಹಾವಿದ್ವಾನ್ ಕರ್ಣಾಟಕಭಾಷಾರತ್ನಂ ವೇ|| ಪಿ. ಆರ್. ಕರಿಬಸವ ಶಾಸ್ತ್ರಿಗಳಿಗೆ ನನ್ನ ವಂದನೆಗಳನ್ನು ಸಮರ್ಪಿಸುತ್ತೇನೆ.

ಅಕ್ಷರಸಂಯೋಜಕರ ಪ್ರಮಾದದಿಂದುಂಟಾದ ತಪ್ಪುಗಳನ್ನು ಶುದ್ಧಾಶುದ್ಧ ಪತ್ರಿಕೆಯಲ್ಲಿ ತೋರಿಸಿರುವೆನು. ಇನ್ನೇನಾದರೂ ಪ್ರಮಾದವಶದಿಂದುಂಟಾಗಿರುವ ದೋಷಗಳಿದ್ದಲ್ಲಿ ಗುಣಜ್ಞರಾಗಿದ್ದವರು ತಿಳಿಸಿದರೆ ಕೃತಜ್ಞತೆಯಿಂದ ಇನ್ನೊಂದು ಮುದ್ರಣದಲ್ಲಿ ಸರಿಪಡಿಸುವೆನು.

ಮೈಸೂರು,
ಅಕ್ಟೋಬರ್, ೧೯೨೨.

ಗ್ರಂಥಕರ್ತರ ಪುತ್ರ,
**ಬಿ. ಮಹದೇವಶಾಸ್ತ್ರಿ.**

# ಕವಿಗಳ ಸಂಕ್ಷಿಪ್ತ ಜೀವನಚರಿತ್ರೆ

ಈ ಗ್ರಂಥಕರ್ತರು ವೀರಶೈವರು. ಇವರ ಮೂಲಪುರುಷರು ಮುರುಡು ಬಸವಸ್ವಾಮಿಗಳು. ಇವರು ಬೆಂಗಳೂರು ಡಿಸ್ಟ್ರಿಕ್ಟಿಗೆ ಸೇರಿದ ನಾರುಸಂದ್ರ ಗ್ರಾಮದ ವೀರಮಾಹೇಶ್ವರವರ್ಗಕ್ಕೆ ಸೇರಿದ ರುದ್ರಾಕ್ಷಿ ಮಠಾಧಿಕಾರಿಗಳು. ಇವರ ಮಕ್ಕಳು ವೈದಿಕ ವಿದ್ಯೆಯಲ್ಲಿ ಸುಪ್ರಸಿದ್ಧರಾದ ಮಹಾದೇವಶಾಸ್ತ್ರಿಗಳು. ಇವರನ್ನು ಈ ರಾಜ್ಯವನ್ನು ಪಾಲಿಸುತ್ತಿದ್ದು ವಿದ್ವತ್ ಪಕ್ಷಪಾತಿಗಳಾಗಿದ್ದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್‌ರವರು ಸಮ್ಮುಖದ ಪುರೋಹಿತರನ್ನಾಗಿ ನೇಮಿಸಿದ್ದರು. ಇವರಿಗೆ ಶುಭಕೃತ್ ಸಂವತ್ಸರದಲ್ಲಿ ಅಂದರೆ ೧೮೪೩ರಲ್ಲಿ ಬಸವಪ್ಪ ಶಾಸ್ತ್ರಿಗಳು ಜನಿಸಿದರು. ಇವರಿಗೆ ಬಾಲ್ಯದಲ್ಲಿಯೇ ಪಿತೃವಿಯೋಗವುಂಟಾಗಲು ಇವರು ಸುಪ್ರಸಿದ್ಧ ಕವಿಗಳಾಗಿದ್ದ ಅಳಿಯ ಲಿಂಗರಾಜ ಅರಸರವರ ಆಶ್ರಯಬಲ ದಿಂದ ದೊಡ್ಡ ದೊಡ್ಡ ವಿದ್ವಾಂಸರಲ್ಲಿ ಸಂಸ್ಕೃತ ಕನ್ನಡಭಾಷೆಗಳನ್ನೂ, ಸಂಗೀತ ಕಲಾದಿಗಳನ್ನೂ ಸಾಂಗವಾಗಿ ವ್ಯಾಸಂಗಮಾಡಿ ಉಭಯ ಭಾಷೆಗಳಲ್ಲಿಯೂ, ಸರ್ವ ಕಲೆಗಳಲ್ಲಿಯೂ ಅಮೋಘವಾದ ಪಾಂಡಿತ್ಯವನ್ನು ಸಂಪಾದಿಸಿಕೊಂಡರು. ತಮ್ಮ ೧೮ನೆಯ ವಯಸ್ಸಿನಲ್ಲಿಯೇ ಕವಿತಾಶಕ್ತಿಯನ್ನು ಪ್ರದರ್ಶಿಸಿ, ಮಹಾಸನ್ನಿಧಾನದ ಅಪ್ಪಣೆಯಂತೆ ಸಂಸ್ಕೃತದಲ್ಲಿ ಬಿಲ್ವವೃಕ್ಷಪೂಜಾವಿಧಿಯನ್ನೂ ಕನ್ನಡದಲ್ಲಿ ಕೃಷ್ಣ ರಾಜಾಭ್ಯುದಯವೆಂಬ ಚಂಪೂ ಗ್ರಂಥವನ್ನೂ ಬರೆದರು. ಅನಂತರ ಶ್ರೀ ಚಾಮರಾಜ ಒಡೆಯರವರಿಗೆ ವಿದ್ಯಾಬೋಧಕರಾಗಿಯೂ, ತದಾಸ್ಥಾನಕವಿಗಳಾಗಿಯೂ ಇದ್ದರು. ತಮ್ಮ ಕವಿತಾಪ್ರತಿಭೆಯಿಂದ 'ಅಭಿನವಕಾಳಿದಾಸ' ಎಂಬ ಪ್ರಶಸ್ತಿಯನ್ನು ಪಡೆದು ನಾಟಕಗಳಲ್ಲಿ ಶಾಕುಂತಲ, ರತ್ನಾವಳಿ, ವಿಕ್ರಮೋರ್ವಶೀಯ, ಮಾಲತೀಮಾಧವ, ಚಂಡಕೌಶಿಕ, ಶೂರಸೇನಚರಿತ್ರೆ (ಷೇಕ್ಸ್‌ಪಿಯರ್ ಮಹಾಕವಿಯ ಒಥೆಲೊ ನಾಟಕದ ಭಾಷಾಂತರ) ಮೊದಲಾದವುಗಳನ್ನೂ, ಕಾವ್ಯಗಳಲ್ಲಿ—ಬಾಲಕಬಾಲಿಕೆಯರಿಗಾಗಿ ಸುಲಭಶೈಲಿಯಲ್ಲಿ ಭರ್ತೃಹರಿ ಸುಭಾಷಿತದ ನೀತಿಶತಕ, ಶೃಂಗಾರಶತಕ, ವೈರಾಗ್ಯ ಶತಕ, ಶಂಕರಶತಕ, ನೀತಿಸಾರಸಂಗ್ರಹ, ಸಾವಿತ್ರೀಚರಿತ್ರೆ ಮೊದಲಾದುವುಗಳನ್ನೂ, ವಿದ್ವಜ್ಜನರಿಗಾಗಿ ಚಂಪೂಗ್ರಂಥರೂಪದಲ್ಲಿ ದಮಯಂತೀಸ್ವಯಂವರ, ಶ್ರೀ ಹರ್ಷ ಚರಿತ್ರೆ, ರೇಣುಕವಿಜಯ ಇವೇ ಮೊದಲಾದುವುಗಳನ್ನೂ, ಸಂಸ್ಕೃತದಲ್ಲಿ ಶಿವಭಕ್ತಿ ಸುಧಾತರಂಗಿಣಿ, ಆರ್ಯಾಶತಕ, ನಕ್ಷತ್ರಮಾಲಿಕಾ, ಅಂಬಾಷೋಡಶಮಂಜರೀ, ಅಷ್ಟಮೂರ್ತಿತನಯಾಷ್ಟಕ, ದಕ್ಷಿಣಾಮೂರ್ತ್ಯಷ್ಟಕ, ಶಿವಾಷ್ಟಕ, ಸದಾಶಿವಾಷ್ಟ ಕವೇ ಮೊದಲಾದುವುಗಳನ್ನೂ ರಚಿಸಿ ೧೮೯೧ನೆಯ ಇಸವಿ ಫೆಬ್ರುವರಿ ವಿಕೃತಿ ಸಂವತ್ಸರದ ಮಾಘಶುದ್ಧ ತ್ರಯೋದಶೀ ಶನಿವಾರ ಸ್ವರ್ಗಸ್ಥರಾದರು.

**ಪ್ರಕಾಶಕ**

# ಈ ಗ್ರಂಥಕರ್ತರ ವಿಷಯದಲ್ಲಿ ವಿದ್ವಾಂಸರ ಅಭಿಪ್ರಾಯಗಳು

---

ಕಂದ || ಸಿರಿ ಮೆರೆವ ವಿಕೃತಿಸಂವ | ತ್ಸರಗತಮಾಘಾಖ್ಯಮಾಸಸಿತಪಕ್ಷದಂ ||
ಸ್ಫುರಿತತ್ರಯೋದಶೀತಿಥಿ | ವರಪೋಷಿತಕಮಲಮಿತ್ರಸುತವಾಸರದೊಳ್ ||
ಅರಮನೆಯಾಸ್ಥಾನಕವೀ | ಶ್ವರನೆಂಬ ನೆಗಳ್ತೆವಡೆದು ರಂಜಿಸುತಿರ್ದಾ ||
ನರಜನವಶಾಸ್ತ್ರಿಪಿರಿದ | ಚ್ಚರಿಯಿಂ ಪರಲೋಕಕಹಹ ಪಯಣಂಗೊಂಡಂ ||
ಈಪಸುಧಾಬುಧಜನಕ | ರ್ಣಾವನಿಯೊಳ್ಸೂಕ್ತಿರಸಮನುರೆಸೂರಿಯುತ್ತುಂ ||
ತೀವಿರ್ದುಜೀವಸಂಕಿಡ | ಲೇವೇಳ್ವೆಂಮುಗಿಲತೆರದೆಮರೆಯಾದನಿವಂ || ೭ ||

(ಆತನ ಚರಿತ್ರಮಂ ಸಂಕ್ಷೇಪದಿಂ ಪೇಳ್ವೆನದೆಂತೆನೆ)

ಶುಭಕೃದ್ವತ್ಸರದೊಳ್ಸ | ದ್ವಿಭವದೆ ಜನಿಸುತ್ತೆ ಬಾಲ್ಯದೊಳೆ ನಲವಿಂದಂ ||
ಉಭಯಸುಭಾಷೆಗಳೊಳ್ಸು | ರ್ಲಭಮಪ್ಪ ವಿಚಕ್ಷಣತೆಯನುರೆಕೈಕೊಂಡಂ ||
ಪದಿನೆಂಟುವಯಸ್ಸಿನೊಳೊದ | ವಿದಕವಿತಾಶಕ್ತಿಯಿಂದೆಬುಧನಿವಹಕ್ಕಂ ||
ಮುದವೊಗೆಯೆಕೃಷ್ಣರಾಜಾ | ಭ್ಯುದಯಮೆನಿಪ್ಪೊಂದುಕೃತಿಯನಿರದಾ
ಗಿಸಿದಂ || ೮ ||

ವರಕೃಷ್ಣಭೂಮಿಪಾಲಂ | ನಿರವಿಸೆ ತಾಂ ಜಲ್ವವೃಕ್ಷಪೂಜಾವಿಧಿಯಂ ||
ಸುರಚಿರಸಂಸ್ಕೃತಭಾಷೆಯೊ | ಳರಿದೆನೆ ವಿರಚಿಸಿದನಾತ್ಮಕೌಶಲದಿಂದಂ ||
ಕನ್ನಡಭಾರತಮೊದಲಾ | ದುನ್ನತಮೆನಿಪಖಿಲಕಾವ್ಯನಿಕರವನೆಲ್ಲರ್ ||
ಮನ್ನಿಪ ತೆರದಿಂರಾಗದೆ ಚೆನ್ನೆ ನೆವಿನಮೋದಿಮೋದದೊಳಗಾಳಿಸಿದಂ || ೯ ||

ಸ್ರ॰ ವೃತ್ತ || ಶೃಂಗಾರಕ್ಕಾಗರಂ ತಾನೆನಿಸಿಮೆರೆವ ಶಾಕುಂತಳಾಭಿಖ್ಯಮಾದು |
ತ್ತುಂಗಾಲಂಕಾರಮಂ ನಾಟಕಮನೆಲಸದುದ್ದಾಮಸಾಹಿತ್ಯಮುಂಮೇಣ್ ||
ಸಂಗೀತಪ್ರೌಢಿಯುಂ ಸಂಗಳಿಸೆ ರಚಿಸಿಕರ್ಣಾಟವಾಗ್ಧಾಟಿಯಿಂದಂ |
ರಂಗಾಚಾರ್ಯಾಖ್ಯಮಂತ್ರಿಪ್ರವರ ಸಭೆಯೊಳೊಲ್ದೋದಿದಂಜಾಣ್ಮೆ
ಯಿಂದಂ ||

ಕಂದ || ಕರ್ಣಾನಂದಮದಾಗಲ್ | ಕರ್ಣಾಟಕಕಾಳಿದಾಸನೆಂಬೀಬಿರುದಂ ||
ತೂರ್ಣದಿನಿತ್ತಂ ವಿದ್ವ | ತ್ಪೂರ್ಣಸಭಾಮಂಡಲಿಯೊಳಗಾಮಂತ್ರೀಶಂ ||
ಉತ್ತರರಾಮಚರಿತ್ರಮ | ಸುತ್ತಮಮಾಗೊಪ್ಪುತಿರ್ಪ ರತ್ನಾವಳಿಯಂ ||
ಚಿತ್ತರಿಸಿಕನ್ನಡದೆತಾ | ನಿತ್ತಂ ಶ್ರೀಚಾಮರಾಜನಾಟಕಸಭೆಗಂ || ೧೦ ||

ನಳಭೂಪಚಂಪುವಂಮಂ | ಗಳಕರಸಂದರ್ಭ ಚಂಡಕೌಶಿಕವುಂ ಕೋ ||
ಮಲವಿಕ್ರಮೋರ್ವಶೀಯುಮ | ಸೊಲಿದೆಸಗಿದನಲ್ತೆ ಚಿತ್ರಮೆನೆಕನ್ನಡದೊಳ್
ವರಶೂರಸೇನಚರಿತವ | ಸುರುಚಿರವಹಸರಸಮಾಲತೀಮಾಧವಮಂ ||
ವಿರಚಿಸಿದಂಕವಿಕಲಭಂ | ನಿರುಪಮಮಹದಕ್ಷಿಣಾಮೂರ್ತ್ಯಷ್ಟಕವುಂ ||
ಸಾವಿತ್ರೀಸುಚರಿತ್ರಮ | ನಾವಿಬುಧವಿನುತ್ಯ ಭರ್ತೃಹರಿವಿರಚಿತಮ ||
ಪ್ಪಾವಿತತಸುಭಾಷಿತಮಂ |ಕೋವಿದರುರೆಮೆಚ್ಚೆ ಮಾಡಿದಂಕನ್ನಡದೊಳ್
ಶಂಕರಶತಕಮನುರೆಯಕ | ಳಂಕಲಸನ್ನೀತಿಸಾರಸಂಗ್ರಹಮಂಮೇಣ್ ||
ಶಂಕಾವಿಹೀನಧೀರ ನಿ | ರಂಕುಶಮತಿರಚಿಸಿದಂವಲಂನಲವಿಂದಂ || ೧೪ ||
ಪೊಸತೆನೆಗೀರ್ವಾಣೋಕ್ತಿಯಿ | ನುಸಿರ್ದಂಮುದದಿಂತ್ರಿಷಷ್ಟಿಗಣನುತಿಶಿವಭ
ಕ್ತಿಸುಧಾತರಂಗಿಣಿಗಳಂ | ರಸಿಕಂನಕ್ಷತ್ರಮಾಲೆಯಂಪರಶಿವೆಯಾ ||೧೫||
ಆರ್ಯಾಶತಕಮನತಿಮಾ | ಧುರ್ಯಸಮೇತಾಷ್ಟಮೂರ್ತಿತನಯಾಷ್ಟಕಮಂ ||
ಚರ್ಯಾಧಿಕಾರ್ಯನತ್ಯಾ | ಶ್ಚರ್ಯಾಮರವಾಣಿಯಿಂದಮೆಸಗಿದನೊಲವಿಂ ||
ಅಂಬಾಷೋಡಶಮಂಜರಿ | ಯೆಂಬಾಮೋದಪ್ರದಾಯಕಸ್ತವಮಣಿಯಂ ||
ಇಂಬಾಗಿರೆಸಂಸ್ಕೃತದಿಂ | ಕುಂಬಿಣಿಯುಬುಧರ್ಕಳೊಲಿವತೆರದಿಂನೆಗಳ್ದಂ ||
ಬಸವೇಶಾಷ್ಟಕಮಂ ಸಂ | ತಸದಿಂದೆ ಸದಾಶಿವಾಷ್ಟಕಮನತಿಮುದದಿಂ ||
ವಸುಧೆಯುಜನದೊಳ್ಭಕ್ತಿ | ಪ್ರಸರಣಮಪ್ಪಂತೆ ಮಾಡಿದಂ ಸದ್ರುಚಿಯಿಂ ||
ರೇಣುಕಚರಿತ್ರೆಯಂನೆರೆ| ಜಾಣಿಂಸಮೆಯುತ್ತುಮಿರ್ಪಸಮಯದೊಳಕಟಾ||
ಪ್ರಾಣವಿಯೋಗಂಸಮನಿಸಿ | ತಾಣಂಕವಿಪುಂಗವಂಗೆವಿಧಿವಶದಿಂದಂ ||
ಕನ್ನಡಗಬ್ಬದ ಹಬ್ಬಮ | ದಿನ್ನೆಲ್ಲಿ ಮನೋಜ್ಞಮೆನಿಪ ಪುಸ್ತಕಪಠನಂ |
ಇನ್ನೆಲ್ಲಿಸುಕವಿತಾಂಗನೆ | ಯುನ್ನತಮಾದುತ್ತಮಾಂಗಕಾದುದುಸಮುಸಂ ||
ಹರ್ಷಚರಿತ್ರಮನದನೀ | ವರ್ಷಂ ಪೂರೈಸವೇಳ್ಕುಮೆಂದಿರೆ ಮೃತಿಯಾ |
ಕರ್ಷಿಸಿತವಸಂಬಲುಹಿಂ | ಘರ್ಷಿಸಲೇಮಾರ್ಪರಾರದೃಷ್ಟಮನಿಳೆಯೊಳ್ ||
ರಸಿಕಶಿರೋಮಣಿಯಾತಂ | ರಸೆಯೊಳ್ಪಲಕಾಲವಿನ್ನುಮಿರದೀಗಳೆ ತಾ ||
ನಸುವಂಬಿಟ್ಟುದರಿಂಬೇ | ವಸವಡೆಯದರಾರ್ಗುಣಜ್ಞರಾಗಿಹವಿಬುಧರ್ ||

26-2-1891.

**ಪಿ. ಆರ್. ಕರಿಬಸವಶಾಸ್ತ್ರಿ**

ಮಹಾರಾಜಾಕಾಲೇಜ್ ಕರ್ಣಾಟಕ ಸೀನಿಯರ್ ಪಂಡಿತ.

|| ಭಾಮಿನೀ ಷಟ್ಪದಿ ||

ರಸಕವಿತ್ವದೊಳಸಮನೆನಿಸುವ |
ಜಸವು ಪಸರಿಸುತಿರಲು ಜಗದೊಳು |
ಮಸಣದೊಡೆಯನ ಸೋದರನಾ ಬಸವಪ್ಪಶಾಸ್ತ್ರಿಯೆನೆ ||
ವಸುಧೆ ಮಾಡಿದ ದುಷ್ಕೃತವೊ ಮೇಣ್ |
ರಸಿಕಲೋಕದ ದುರ್ದಶೆಯೊ ಪೊಂ |
ಬಸಿರನೀಪರಿ ಬರೆದನೇತಕೆ ಹಾ ಮಹಾದೇವ ||೧||

|| ಕಂದಪದ್ಯ ||

ನವಕಾಳಿದಾಸನೆಂದಾ |
ಕವಿಸಭೆಯೊಳ್ ಪೆಸರನಾಂತ ಜಸಮುಜ್ವಳಿಸಲ್ ||
ಶಿವನ ಮಹಾಪಾದಸರೋ |
ಜವ ಸೋದರಂ ಬಸವಶಾಸ್ತ್ರಿ ಜೀವಿಪನಲ್ತೇ ||೨||

ಶೋಕಿಪುದೇಸಿದ ತೆಗೆ ಪರ |
ಲೋಕಕೆ ಬಸವಪ್ಪಶಾಸ್ತ್ರಿ ಪೋದುದಕೀಗಳ್ ||
ಲೋಕೋತ್ತರಕವಿಯೆಂದು ವಿ |
ವೇಕಿಗಳಿಂ ಶ್ಲಾಘ್ಯನಾದನಾತನೆ ಧನ್ಯಂ ||೩||

ಬಸವಪ್ಪಶಾಸ್ತ್ರಿಯಳಿಯಲ್ |
ವ್ಯಸನಮದೆಳ್ಳನಿತುಮೆನ್ನ ಮನದೊಳಗಿಲ್ಲಂ ||
ರಸಕವಿತಾಂಗನೆ ಹಿಮದೊಳ್ |
ಬಸವಳಿದಬ್ಜಿನಿವೊಲಾದಳೆಂಬುದೆ ದುಗುಡಂ ||೪||

ಕನ್ನಡದ ಕಬ್ಬಮೂಹಿಸ |
ಲಿನ್ನೇಂ ಪುಟ್ಟುಗುಮೆ ರಸಿಕ ರಂಜನ ಚತುರಂ ||
ಮುನ್ನೆ ಬಸವಪ್ಪಶಾಸ್ತ್ರಿಯೆ |
ಚೆನ್ನೆನೆ ಪೇಳಿರ್ಪ ಕೃತಿಯನುಳಿದೀಜಗದೊಳ್ ||೫||

ಆಸ್ಥಾನಕವಿ,

**ನಂಜನಗೂಡು ಸುಬ್ಬಾಶಾಸ್ತ್ರಿಗಳು.**

ಶ್ರೀಮಾನ್ ಆರ್. ತಾತ, ಎಂ.ಎ., ಎಲ್.ಟಿ. ಯವರು ಶ್ರೀ ಕೃಷ್ಣಸೂಕ್ತಿ ಎಂಬ ಮಾಸಿಕಪತ್ರದಲ್ಲಿ ಬರೆದಿದ್ದ ಕುಮಾರವ್ಯಾಸನ ಭಾರತದ ಸಂಬಂಧವಾದ ಕಾವ್ಯವಿಮರ್ಶೆಯಲ್ಲಿ ಕೈ|| ಬಸವಪ್ಪಶಾಸ್ತ್ರಿಗಳ ಭಾರತಪಠನ ಶಕ್ತಿಯನ್ನೂ ಕವಿತಾ ಪ್ರತಿಭೆಯನ್ನೂ ಈ ರೀತಿ ಹೊಗಳಿದ್ದಾರೆ—

ಬಿರಿವನ್ನಂ ಸುಚ್ಛುಸೂರಪ್ಪಿನಮೆರ್ದೆ ಬೆಳಗಲ್ ಬೆಳ್ಪಸಂ ಚಂದ್ರಿಕಾ ವಿ|
ಸ್ತರಮಂ ತನ್ನೊಂದು ಸಲ್ಗಬ್ಬದ ಗುಣಮೆ ಕರಂ ಮೌರ್ವಿಯಾಗಲ್ ಮನಂಗೊ|
ಳ್ವ ರಸಕ್ಕಿಂಬಾದ ಪದ್ಯಂಗಳ ಸೆರವಿಯುರಲ್ವಿಲ್ಲನಾಂತಣ್ಮೆ ಟಂಕಾ|
ರರವಂದೀವೃತ್ತಿರಲ್ಕಾ ಬಸವಕವಿವಚೋಧಾರವೇಂ ಕರ್ಣಪೂರಂ ||

ನಮ್ಮ ಕಾಲದಲ್ಲಿ ಸ್ವರ್ಗಸ್ಥರಾದ ಬಸವಪ್ಪ ಕವಿಗಳು ಈ ಗ್ರಂಥವನ್ನು (ಕುಮಾರವ್ಯಾಸನ ಭಾರತವನ್ನು) ಓದುವುದರಲ್ಲಿ ಸಮರ್ಥರೆಂದು ಹೇಳುವವರು ಇನ್ನೂ ಬಹಳ ಜನರು ಇದ್ದಾರೆ. ಮೈಸೂರೊಳಗೆಲ್ಲಾ ಇವರಂತೆ ಭಾರತವನ್ನೋದುವವರು ಮತ್ತೊಬ್ಬರಿರಲಿಲ್ಲ; ಅಂತಹ ಮಹಾನುಭಾವರನ್ನು ನಾವು ಕೇಳುವ ಪುಣ್ಯವೆಲ್ಲಿದೆ? ಭಾರತದ ಶೈಲಿಯಂತೆ ಈ ಕಾಲದಲ್ಲಿ ಸರಿಯಾಗಿ ಬರೆಯುತ್ತಿದ್ದವರು ಒಬ್ಬರು! ಅವರೂ ಸ್ವರ್ಗಸ್ಥರಾದರೆಂದು ಕೇಳಿ ಮೂರು ವರ್ಷಗಳಾದವು. ಇದರಿಂದ ಕರ್ನಾಟಭಾಷೆಗೆ ದೊಡ್ಡ ವಿಪತ್ತು ಬಂತೆಂದು ಕನ್ನಡನುಡಿಯಲ್ಲಿ ಮಮತೆಯುಳ್ಳವರೆಲ್ಲರೂ ದುಃಖಿಸಬಹುದು. ಇವರು ಕನ್ನಡಕ್ಕಾಗಿ ಪಟ್ಟಿರುವ ಪ್ರಯಾಸವನ್ನೂ ಮಾಡಿರುವ ಉಪಕಾರವನ್ನೂ ಬಣ್ಣಿಸಲಿಕ್ಕೆ ಒಂದು ಗ್ರಂಥವಾದರೂ ಸಾಲದು. ಇವರ ಮರಣವಾರ್ತೆಯಿಂದ ಒಮ್ಮೆ ಇವರೇ ಹೇಳಿರುವಂತೆ,

ಕೇಳಲೊಡನೊಡನೆ ಕುದಿಗೊಂ|
ಡೇಳುವಕ್ಕಿಯ ಬೊಬ್ಬೆಯುಬ್ಬಿಸ|
ಗೋಳು ಪಸರಿಸಿ ತೀವಿ ತುರುಗಿತು ಸಕಲದಿಕ್ತಟವ ||

**ಆರ್. ತಾತ, ಎಂ.ಎ., ಎಲ್.ಟಿ.**

|| ಭಾಮಿನೀ ಷಟ್ಪದಿ ||

ರಸಕವಿತ್ವದೊಳಸಮನೆನಿಸುವ |
ಜಸವು ಪಸರಿಸುತಿರಲು ಜಗದೊಳು |
ಮುಸಣದೊಡೆಯನ ಸೇರ್ದನಾ ಬಸವಪ್ಪಶಾಸ್ತ್ರಿಯೆನೆ ||
ವಸುಧೆ ಮಾಡಿದ ದುಷ್ಕೃತವೊ ಮೇಣ್ |
ರಸಿಕಲೋಕದ ದುರ್ದಶೆಯೊ ಪೊಂ |
ಬಸಿರನೀಪರಿ ಬರೆದನೇತಕೆ ಹಾ ಮಹಾದೇವ || ೧ ||

|| ಕಂದಪದ್ಯ ||

ನವಕಾಳಿದಾಸನೆಂದಾ |
ಕವಿಸಭೆಯೊಳ್ ಪೆಸರನಾಂತ ಜಸಮುಜ್ವಳಿಸಲ್ ||
ಶಿವನ ಮಹಾಪಾದಸರೋ |
ಜವ ಸೇರ್ದಂ ಬಸವಶಾಸ್ತ್ರಿ ಜೀವಿಪನಲ್ತೇ || ೨ ||

ಶೋಕಿಪುದೇನಿದ ತೆಗೆ ಪರ |
ಲೋಕಕೆ ಬಸವಪ್ಪಶಾಸ್ತ್ರಿ ಪೋದುದಕೀಗಳ್ ||
ಲೋಕೋತ್ತರಕವಿಯೆಂದು ವಿ |
ವೇಕಿಗಳಿಂ ಶ್ಲಾಘ್ಯನಾದನಾತನೆ ಧನ್ಯಂ || ೩ ||

ಬಸವಪ್ಪಶಾಸ್ತ್ರಿಯಳಿಯಲ್ |
ವ್ಯಸನಮದೆಳ್ಳನಿತುಮೆನ್ನ ಮನದೊಳಗಿಲ್ಲಂ ||
ರಸಕವಿತಾಂಗನೆ ಹಿಮದೊಳ್ |
ಬಸವಳಿದಬ್ಜನಿವೊಲಾದಳೆಂಬುದೆ ದುಗುಡಂ || ೪ ||

ಕನ್ನಡದ ಕಬ್ಬಮೂಹಿಸ |
ಲಿನ್ನೇಂ ಪುಟ್ಟುಗುಮೆ ರಸಿಕ ರಂಜನ ಚತುರಂ ||
ಮುನ್ನೆ ಬಸವಪ್ಪಶಾಸ್ತ್ರಿಯೆ |
ಚೆನ್ನೆನೆ ಪೇಳಿರ್ಪ ಕೃತಿಯನುಳಿದೀಜಗದೊಳ್ || ೫ ||

ಆಸ್ಥಾನಕವಿ,

**ನಂಜನಗೂಡು ಸುಬ್ಬಾಶಾಸ್ತ್ರಿಗಳು.**

ಶ್ರೀಮಾನ್ ಆರ್. ತಾತ, ಎಂ.ಎ., ಎಲ್.ಟಿ. ಯವರು ಶ್ರೀ ಕೃಷ್ಣಸೂಕ್ತಿ ಎಂಬ ಮಾಸಿಕಪತ್ರದಲ್ಲಿ ಬರೆದಿದ್ದ ಕುಮಾರವ್ಯಾಸನ ಭಾರತದ ಸಂಬಂಧವಾದ ಕಾವ್ಯವಿಮರ್ಶೆಯಲ್ಲಿ ಕೈ|| ಬಸವಪ್ಪಶಾಸ್ತ್ರಿಗಳ ಭಾರತಪಠನ ಶಕ್ತಿಯನ್ನೂ ಕವಿತಾ ಪ್ರತಿಭೆಯನ್ನೂ ಈ ರೀತಿ ಹೊಗಳಿದ್ದಾರೆ—

ಬಿರಿವನ್ನಂ ಸುಚ್ಚುಸೂರಪ್ಪಿನಮೆರ್ದೆ ಬೆಳಗಲ್ ಜೆಳ್ಳಸಂ ಚಂದ್ರಿಕಾ ವಿ|
ಸ್ತರಮಂ ತನ್ನೊಂದು ಸಲ್ಗಬ್ಬದ ಗುಣಮೆ ಕರಂ ಮೌರ್ವಿಯಾಗಲ್ ಮನಂಗೊ|
ಳ್ವ ರಸಕ್ಕಿಂಬಾದ ಪದ್ಯಂಗಳ ನೆರವಿಯಿರಲ್ವಿಲ್ಲನಾಂತಗ್ಗೆ ಟಂಕಾ|
ರರವಂದೀವೃತ್ತಿರಲ್ಕಾ ಬಸವಕವಿವಚೋಧಾರಮೇಂ ಕರ್ಣಪೂರಂ||

ನಮ್ಮ ಕಾಲದಲ್ಲಿ ಸ್ವರ್ಗಸ್ಥರಾದ ಬಸವಪ್ಪ ಕವಿಗಳು ಈ ಗ್ರಂಥವನ್ನು (ಕುಮಾರವ್ಯಾಸನ ಭಾರತವನ್ನು) ಓದುವುದರಲ್ಲಿ ಸಮರ್ಥರೆಂದು ಹೇಳುವವರು ಇನ್ನೂ ಬಹಳ ಜನರು ಇದ್ದಾರೆ. ಮೈಸೂರೊಳಗೆಲ್ಲಾ ಇವರಂತೆ ಭಾರತವನ್ನೋದುವವರು ಮತ್ತೊಬ್ಬರಿರಲಿಲ್ಲ; ಅಂತಹ ಮಹಾನುಭಾವರನ್ನು ನಾವು ಕೇಳುವ ಪುಣ್ಯವೆಲ್ಲಿದೆ? ಭಾರತದ ಶೈಲಿಯಂತೆ ಈ ಕಾಲದಲ್ಲಿ ಸರಿಯಾಗಿ ಬರೆಯುತ್ತಿದ್ದವರು ಒಬ್ಬರು! ಅವರೂ ಸ್ವರ್ಗಸ್ಥರಾದರೆಂದು ಕೇಳಿ ಮೂರು ವರ್ಷಗಳಾದವು. ಇದರಿಂದ ಕರ್ನಾಟಭಾಷೆಗೆ ದೊಡ್ಡ ವಿಪತ್ತು ಬಂತೆಂದು ಕನ್ನಡನುಡಿಯಲ್ಲಿ ಮಮತೆಯುಳ್ಳವರೆಲ್ಲರೂ ದುಃಖಿಸಬಹುದು. ಇವರು ಕನ್ನಡಕ್ಕಾಗಿ ಪಟ್ಟಿರುವ ಪ್ರಯಾಸವನ್ನೂ ಮಾಡಿರುವ ಉಪಕಾರವನ್ನೂ ಬಣ್ಣಿಸಲಿಕ್ಕೆ ಒಂದು ಗ್ರಂಥವಾದರೂ ಸಾಲದು. ಇವರ ಮರಣವಾರ್ತೆಯಿಂದ ಒಮ್ಮೆ ಇವರೇ ಹೇಳಿರುವಂತೆ,

ಕೇಳಲೊಡನೊಡನೆ ಕುದಿಗೊಂ|
ಡೇಳುವಕ್ಕಿಯ ಬೊಬ್ಬೆಯುಬ್ಬಿನ|
ಗೋಳು ಪಸರಿಸಿ ತೀವಿ ತುರುಗಿತು ಸಕಲದಿಕ್ತಟವ||

**ಆರ್. ತಾತ, ಎಂ.ಎ., ಎಲ್.ಟಿ.**



ಮೈಸೂರು ಶ್ರೀಮನ್ಮಹಾರಾಜರವರ ಆಸ್ಥಾನಕವಿಗಳಾದ

**ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಗಳು.**

ಜನನ 1843. ಮರಣ 1891.

ಕರ್ಣಾಟಕ

# ಶಾಕುಂತಲ ನಾಟಕಂ

## ಪ್ರಥಮಾಂಕಂ

*ವೃತ್ತ || ಆವುದು ಧಾತೃಸೃಷ್ಟಿಗೆ ಮೊದಲ್ ಹುತಹವ್ಯಮನಾಂಪುದಾವುದಿ
ನ್ನಾವುದು ಹೋತೃ ಶಬ್ದಗುಣಮಾವುದವಾವುವು ಕಾಲಕರ್ತೃಗಳ್ |
ಆವುದುಸಿರ್ ಜಗಕ್ಕಸಿರ್ವರಾವುದ ಭೂತಕುಲಪ್ರಧಾನಮುಂ
ದಾ ವೊಡಲೆಂಟರಿಂದೆ ಮೆರೆವೀಶನೊಡರ್ಚುಗೆ ನಿಮ್ಮಭೀಷ್ಟಮಂ || ೧ ||

ಸೂತ್ರಧಾರಂ—(ತೆರೆಯ ಕಡೆಗೆ ನೋಡಿ) ಆರ್ಯೆ, ಅಲಂಕಾರ ನೆರವೇರಿದ್ದರೆ ಇತ್ತ ಬಾ.

ನಟಿ—ಅಯ್ಯಾ, ಇದೋ ಬಂದೆನು. ನಾನು ಮಾಡತಕ್ಕ ಕಾರ್ಯವೇನು? ಆಜ್ಞಾಪಿಸಬೇಕು.

ಸೂ—ಆರ್ಯೆ, ಸಭಾಸದರಿವರು ಸಕಲಕಲಾಪ್ರವೀಣರು. ಈಗಲಾ ಕಾಳಿದಾಸ ಮಹಾಕವಿರಚಿತವಾದ ಅಭಿಜ್ಞಾನಶಾಕುಂತಲವೆಂಬ ನಾಟಕವು ಕರ್ಣಾಟಕ ಭಾಷೆಯಲ್ಲಿ ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಯಿಂದ ರಚಿಸಲ್ಪಟ್ಟಿರುವುದು. ಆ ನಾಟಕವನ್ನಾಡಿ ಇವರನ್ನು ಸಂತೋಷಪಡಿಸಬೇಕು. ಆದುದರಿಂದ ಪ್ರತಿಪಾತ್ರವೂ ತಮ್ಮ ತಮ್ಮ ಕಾರ್ಯದಲ್ಲಿ ಎಚ್ಚರವಾಗಿರತಕ್ಕದ್ದು.

ನಟಿ—ಅಯ್ಯಾ, ತಾವು ಆಯಾ ವಸ್ತುಗಳ ಅಭಿನಯರೂಪ ಕಾರ್ಯದಲ್ಲಿ ತಕ್ಕಂತೆ ಪಾತ್ರವನ್ನು ನೇರ್ಪುಗೊಳಿಸಿರುವ ಕಾರಣ ತಮಗೇನೂ ಕೊರತೆಯುಂಟಾಗಲಾರದು.

ಸೂ—ಆರ್ಯೆ, ಆದರೂ ನಿಜವನ್ನು ಹೇಳುವೆನು ಕೇಳು.

ಕಂದ || ರಸಿಕರ್ಕಳೊಪ್ಪುವನ್ನಂ
ರಸಾಭಿನಯ ಕೌಶಲಂಗಳೊಳ್ಳಿದುವೆನುತಾ |

---

*ವೃತ್ತ || ಶ್ರೀಮದ್ವಾಮಾಂಕಪರ್ಯಂಕಗತಗಿರಿಸುತಾಸ್ಮೇರವಕ್ತ್ರಾಬ್ಜಭೃಂಗಂ
ವ್ಯೋಮಾಪ್ತೇಜೋನಿಲಕ್ಷ್ಮಾರುಣಶಶಿಯಜಮಾನಾಷ್ಟಮೂರ್ತಿಪ್ರಪನ್ನಂ |
ಸೋಮಾರ್ಧೋತ್ತಂಸಮೂರ್ಧಂ ಜಗದವನಸಮುತ್ಕಂಠನಾ ನೀಲಕಂಠಂ
ಚಾಮೋರ್ವೀಪಾಲನಂ ಪಾಲಿಸುಗೆ ಗರಪುರೀಕ್ಷೇತ್ರವಾಸಂ ಮಹೇಶಂ ||

ಸುಸಿರಂ ವಲಮೋದಿದ ಮಾ
ನಿಸರ್ಗಂ ತಮ್ಮೊಳಗೆ ತಮಗೆ ಸಂಬುಗೆಯಿಲ್ಲಂ || ೨ ||

ನಟಿ—(ಸವ್ರುಳಾಗಿ) ಅಯ್ಯಾ, ಮುಂದಣ ಕಾರ್ಯವೇನಾಜ್ಞಾಪಿಸಬೇಕು.

ಸೂ—ಆರ್ಯೆ, ಸಭಾಸದರಿಗೆ ಕರ್ಣಾನಂದವನ್ನುಂಟುಮಾಡುವುದಕ್ಕಿಂತಲೂ ಬೇರೆ ಕಾರ್ಯವೇನುಂಟು ?

ನಟಿ—ಹಾಗಾದರೆ ಯಾವ ಋತುವನ್ನುದ್ದೇಶಿಸಿ ಗಾನವಂ ಮಾಡಲಿ ?

ಸೂ—ಆರ್ಯೆ, ಈ ಗ್ರೀಷ್ಮಋತುವು ಬಂದು ಬಹುದಿವಸಗಳಾಗದ ಕಾರಣ ಉಪಭೋಗಕ್ಕೆ ಯೋಗ್ಯವಾಗಿರುವುದು ; ಇದನ್ನು ಉದ್ದೇಶಿಸಿ ಗಾನವಂ ಮಾಡು. ಈಗಲಾದರೊ—

ಕಂದ || ಸಲಿಲಾವಗಾಹಸಕ್ಕತಿ
ಲಲಿತತೆಯಂ ಬನದೆಲರ್ಗೆ ಪಾದರಿಗಂಪಂ |
ಸುಲಭತೆಯಂ ನಿದ್ರೆಗೆ ನೆಳ
ಲೊಳಗಿತ್ತುವು ಪರಿಣತಿಯೊಳೆ ಸೊಗಯಿಪ ಪಗಲ್ಗಳ್ || ೩ ||

ನಟಿ—ಹಾಗೆಯೇ ಸರಿ. (ಎಂದು ಗಾನವಂ ಮಾಡುವಳು)

*ಕಂದ || ಯೋಷಾಜನವೊಲವಿಂದೆ ಶಿ
ರೀಷಮನತಿಮೃದುಲಕೇಸರಾಗ್ರಮನಳಿಯಿಂ |
ದೀಷಚ್ಚುಂಬಿತಮಂ ಸವಿ
ಶೇಷದಯಿಂ ಕರ್ಣಪುರವನೆಸಗುವುದಲ್ತೇ || ೪ ||

ಸೂ—ಆರ್ಯೆ, ಚೆನ್ನಾಗಿ ಪಾಡಿದೆ; ನಿನ್ನ ರಾಗದಲ್ಲಿ ಚಿತ್ತವಿಟ್ಟ ಸಭಾಸದರೆಲ್ಲರೂ

---

ರಾಗ—ಮೋಹನಕಲ್ಯಾಣಿ. ಆದಿತಾಳ.

ಶ್ರೀಚಕ್ರಾವಾಸಿನಿ | ಶ್ರಿತಲೋಕೋಲ್ಲಾಸಿನಿ || ಪಲ್ಲ || ಶುಂಭನಿಷೂದಿನಿ | ಜಂಭಾರಿಪೋಷಿಣಿ | ಶಂಭುಸಂತೋಷಿಣಿ || ೧ || ಮಹಿತಮಹಾಬಲ | ಮಹಿಧರಾವಾಸಿನಿ | ಮಹಿಷವಿಧ್ವಂಸಿನಿ || ೨ || ಶ್ರೀಚಾಮನೃಪಮನೋ | ಗೋಚರಪದೆ ಜಯ | ಶ್ರೀಚಾಮುಂಡೇಶ್ವರಿ || ೩ ||

* ರಾಗ—ಬಿಹಾಗ್. ಆದಿತಾಳ.

ನಟಿ—ಭಾಸುರಮಾದುದೊ | ಬೇಸಗೆ ಜನಗಳ | ಬೇಸರನೆಲ್ಲವ ಕಳೆಯುತಲೀಂ || ಪ || ದರದಳಿತೋಜ್ವಲಪಾಟಲಪಾಳಿ | ಸುರಭಿಮನೋಜ್ಞಮಧೂಳಿ | ವೆರೆಯುತಲೊಡನನು || ಸರಿಸೆ ಮದಾಳಿ | ಬರುವುದು ಮಗಮಗಿಸುತೆ ಬನಗಾಳಿ || ೧ || ತಲೆಯನು ತಗ್ಗಿಸೆ ಗತಿಗೆ ಮರಾಳಿ | ತಳರ್ವ ತರುಣಿಯರ ಜಲಕೇಳೀ | ಚಲಿತಕಚಚ್ಯುತಕೌಸುಮಧೂಳೀ | ಕಲನಾಸುರಭಿಸರೋವರ ಪಾಳಿ || ೨ || ತರುಗಳ ನೆಳಲೊಳು ಪಥಿಕನಿಕಾಯಂ | ನೆರೆಮಲಗಿರೆ ತಾಪಿತಕಾಯಂ | ಬರೆ ಪರಿಣಾಮಸಮಯರಮಣೀಯಂ | ಮೆರೆವ ದಿವಸವಾದರಣೀಯಂ || ೩ ||

ಚಿತ್ರ ಪ್ರತಿಮೆಗಳಂತಾದರು. ಹೇಳು, ಈಗ ಯಾವ ನಾಟಕವನ್ನಾಡಿ ಈ ಸಭಾಸದರನ್ನು ಸಂತೋಷಪಡಿಸೋಣ ?

ನಟಿ—ಅಯ್ಯಾ, ಮೊದಲೇ ಅಭಿಜ್ಞಾನಶಾಕುಂತಲವೆಂಬ ಅಪೂರ್ವ ನಾಟಕವನ್ನು ಕರ್ಣಾಟಕಭಾಷೆಯಿಂದಾಡುವಂತೆ ತಾವು ಅಪ್ಪಣೆಯಂ ಕೊಡಲಿಲ್ಲವೇ ?

ಸೂ—ಆರ್ಯೆ, ಚೆನ್ನಾಗಿ ಎಚ್ಚರಿಸಿದೆ ; ಈಗ ಹೇಳಿದ್ದನ್ನು ಈಗಲೇ ಮರೆದೆನಲ್ಲಾ ! ಏತಕ್ಕೆಂದರೆ,

ಕಂದ || ಅಂಗಸೆ ಹೃತನಾದೆಂ ಹೃದ
ಯಂಗೊಳ್ಪೀ ನಿನ್ನಗೀತರಾಗದೊಳೀಗಳ್ |
ತುಂಗತರವೇಗಶಾಲಿ ಕು
ರಂಗದೆ ಹೃತನಾದ ತೆರದೊಳೀ ದುಷ್ಯಂತಂ || ೫ ||

ಇದು ಪ್ರಸ್ತಾವನೆ

---

(ಆಮೇಲೆ ಶರಚಾಪಹಸ್ತನಾದ ರಾಜನು ರಥಾರೂಢನಾಗಿ ಮೃಗವನ್ನು ಬೆನ್ನಟ್ಟಿಕೊಂಡು ಸೂತನೊಡನೆ ಬರುವನು.)

ಸೂತಂ—(ರಾಜನನ್ನೂ ಮೃಗವನ್ನೂ ನೋಡಿ) ಎಲೈ ಆಯುಷ್ಮಂತನೆ !

ಕಂದ || ಹರಿಣನುಮನಧಿಜ್ಯಧನು
ರ್ಧರನೆನಿಸಿದ ನಿನ್ನುಮಂ ನಿರೀಕ್ಷಿಸುವೆನಗೇ |
ನೊರೆದಪೆನಮಮಾ ದೃಗ್ಗೋ
ಚರನಾದಂತಿದೆ ಪಿನಾಕಿ ಹರಿಣಾನುಗತಂ || ೬ ||

ರಾಜಂ—ಎಲೈ ಸಾರಥಿಯೇ, ಈ ಮೃಗವು ನಮ್ಮನ್ನು ಬಹುದೂರ ಸೆಳೆದುಕೊಂಡು ಬಂದಿತು. ಇದು ಈಗಲೂ ಕೂಡ,

*ವೃತ್ತ || ಕೊರಲಂ ತಾಂ ಕೊಂಕುಗೆಯ್ಯುತ್ತಡಿಗಡಿಗೊಡನೈತರ್ಪ ತೇರಲ್ಲಣಂ ನಮೇ[illegible] ಟ್ಟಿರೆ ನೋಟಂ ಬಾಣಪಾತಕ್ಕಗಿದಿರುಕಿಸುತಂ ಪೃಷ್ಠಮಂ ಮಾರ್ಗದೊಳ್ ತೀ

---

*ರಾಗ—ಜಲಾಬು. ಆದಿತಾಳ.

ರಾಜಂ—ಪಾರಿತು ಪಾರಿತು ಫಡ ಮೃಗಪೋತ | ತೇರನಿದರ ಬಳಿ ಸೇರಿಸು ಸೂತ || ಪ || ಕೊರಲನು ಕೊಂಕಿಸಿ | ಬರುವ ರಥವ ತಾ | ತಿರುತಿರುಗೀಕ್ಷಿಪ | ಪರಿಯ ನೋಡಿದೆಯಾ || ೧ || ಶರಪತನದ ಭಯ | ಕಿರದಿದು ಪೃಷ್ಠವ | ನಿರುಕಿಸಿ ಮುಂಬರಿ | ದರರೆ ಧೀಂಕಿಡುತಾ || ೨ || ಶ್ರಮವಿವೃತಾಸ್ಯದಿ | ಸಮೆದ ಗಳತ್ಕುಶ | ಸಮಿತಿ ವನೋರ್ವಿಯ | ನಮಮ ಮುಸುಕಲು || ವೇಗವದೆಂತೊ ಭೂ | ಭಾಗದೆ ಕಾಣೆವು | ದಾಗಳೆ ಬಾನೊಳೆ | ಪೋಗುವುದಹಹಾ || ೪ ||

ವಿರೆ ನೀಡುಂ ಬಿಟ್ಟ ಬಾಯಿಂ ಶ್ರಮದುದಿರ್ವರೆಮೆಲ್ದಿರ್ದ ದರ್ಭಾಂಕು
ರಂಗಳ್
ಧರೆಯಲ್ಲೋರೊರ್ಮೆ ಕಾಲಿಟ್ಟಹಹ ಸಿರುಕಿಸ್ಸೆ ಬಾಸೊಳೇ ಪಾರಿ
ಪೋಕುಂ || ೭ ||

ರಾಜಂ—(ಆಶ್ಚರ್ಯಯುಕ್ತನಾಗಿ) ಇದೇನು! ನಾನು ಬೆನ್ನಟ್ಟಿ ಬಂದಾಗ್ಯೂ ಈ ಮೃಗವನ್ನು ಕಷ್ಟದಿಂದ ಕಾಣಬೇಕಾಗಿದೆ.

ಸೂತಂ—ಎಲೈ ಆಯುಷ್ಮಂತನೇ! ಭೂಮಿಯು ಹಳ್ಳವಾಗಿರುವುದೆಂದು ಕಡಿವಾಣವನ್ನು ಸೆಳೆದಕಾರಣ ರಥವೇಗವು ಮಂದವಾಯಿತು, ಆದ್ದರಿಂದ ಮೃಗವು ನಮಗೆ ಬಹುದೂರಗತವಾಯಿತು. ಸಮಪ್ರದೇಶವನ್ನು ಹೊಂದಿದ ಸಿನಗನ್ನು ಮೃಗವು ಸಿಕ್ಕದೆ ಇರಲಾರದು.

ರಾಜಂ—ಆದರೆ ಕುದುರೆಗಳ ಕಡಿವಾಣಗಳನ್ನು ಸಡಿಲಬಿಡು.

ಸೂತಂ—ಆಯುಷ್ಮಂತನಾಜ್ಞೆಯಂತಾಗಲಿ. (ಎಂದು ರಥವೇಗವನ್ನು ತೋರಿಸಿ) ಎಲೈ ಆಯುಷ್ಮಂತನೆ! ಕಡಿವಾಣವನ್ನು ಸಡಿಲಿಸಿದೊಡನೆ, ನೋಡು ನೋಡು,

ಕಂದ || ನಡೆ ಮಿಡುಕದ ಚಮರದ ನೀ
ಳ್ದೊಡಲೆತ್ತಿದ ಕಿವಿಯ ತಮ್ಮ ಪದರಜಮುಂ ಪಾ|
ಯ್ದೊಡೆ ಸಿಲ್ಕದಶ್ವಗಳ್ ಧೀಂ
ಕಿಡುವುವು ತಸ್ಮೃಗಜವಾಸಹಿಷ್ಣುಗಳೆಂಬೋಲ್ || ೮ ||

ರಾಜಂ—ಎಲೈ, ಸಾರಥಿಯೆ! ನಿಶ್ಚಯವಾಗಿ ಕುದುರೆಗಳು ಸೂರ್ಯಾಶ್ವಗಳನ್ನೂ ಮೀರಿರುವುವು. ಹಾಗೆಯೇ ಸರಿ—

೧. ವೃತ್ತ || ಆವುದು ನೋಡೆ ಸೂಕ್ಷ್ಮಮದೆ ವಿಸ್ತೃತಮಪ್ಪುದು ಮಧ್ಯದಲ್ಲಿ ತಾ
ನಾವುದು ಛಿನ್ನಮಾಗಿರುವುದಂತದೆ ಜೋಡಿಸಿದಂತೆ ತೋರ್ಪುದೈ|
ಆವುದು ವಕ್ರಮಿರ್ಪುದದೆ ತಾಂ ಋಜುವಾಗುತೆ ಕಾಣ್ಬುದೆನ್ನ ಕ
ಣ್ಣಾವುದುಮಿಲ್ಲ ದೂರದೆ ಚಣಂ ರಥವೇಗದೆ ಪಾರ್ಶ್ವದಲ್ಲಿಯುಂ || ೯ ||

ಎಲೈ ಸೂತನೆ! ಇದೊ, ಮೃಗವನ್ನು ಹೊಡೆಯುವೆನು; ನೋಡು. (ಎಂದು ಶರಸಂಧಾನವನ್ನು ಅಭಿನಯಿಸುವನು.)

ತೆರೆಯಲ್ಲಿ—ಓಹೋ! ಮಹಾರಾಜನೆ, ಆಶ್ರಮಮೃಗವಿದು ಕೊಲ್ಲತಕ್ಕದ್ದಲ್ಲ! ಕೊಲ್ಲತಕ್ಕದ್ದಲ್ಲ!

ಸೂತಂ—ಎಲೈ, ಆಯುಷ್ಮಂತನೆ! ನಿಲ್ಲು ನಿಲ್ಲು! ನಿನ್ನ ಬಾಣಕ್ಕೆ ಗುರಿಯಾದ ಈ ಮೃಗಕ್ಕೆ ಅಡ್ಡಲಾಗಿ ಮುನಿಗಳು ಬಂದರು.

ರಾಜಂ—(ತ್ವರೆಯಿಂದ ನೋಡಿ) ಹಾಗಾದರೆ ಕುದುರೆಗಳನ್ನು ನಿಲ್ಲಿಸು.

ಸೂತಂ—ಆಗಲಿ. (ಎಂದು ರಥವನ್ನು ನಿಲ್ಲಿಸುವನು)

(ಅನಂತರ ಮೂವರು ವೈಖಾನಸರು ಬರುವರು)

ಮೂರನೆಯ ವೈಖಾ—(ಕೈಯೆತ್ತಿ ಮೃಗವನ್ನು ತೋರಿಸಿ) ಎಲೈ, ರಾಯನೇ!

*ವೃತ್ತ || ಸಲ್ಲದು ಸಲ್ಲದಂಬಿದನಿನಲ್ಲಡ ಮೆಲ್ಲಿತರಿಂದೆ ಕೂಡಿದೀ
ಪುಲ್ಲೆಯ ಮೆಯ್ಯೊಳಕ್ಕಟಿಡುವಂತೆವೊಲಗ್ನಿಯ ತೂಲರಾಶಿಯೊಳ್ |
ಎಲ್ಲಿ ಕುರಂಗಕಂಗಳತಿಚಂಚಲಮಪ್ಪ ಬರ್ದುಂಕು ಭೂಪ ಪೇ
ಳೆಲ್ಲಿ ಸಿಡಿಲ್ಗೆ ಸಾಟಿಯೆನೆ ಬಿರ್ರನೆ ಬೀಳ್ವ ಭವಚ್ಛಿಳೀಮುಖಂ || ೧೦ ||

ಕಂದ || ಅದರಿಂದೆ ತೊಟ್ಟ ಬಾಣವ
ನಿದನಿಳುಪ್ಪೈ ಜನಪ ದೀನರಂ ಪೊರೆವುದಕ |
ಲ್ಲದೆ ನಿರಪರಾಧಜಂತುವ
ನದೆಯಲ್ ನಿಮಗಲ್ತು ಶಸ್ತ್ರಮವನೀತಳದೊಳ್ || ೧೧ ||

ರಾಜಂ—ಇದೋ, ಬಾಣವನ್ನು ಇಳಿಸಿದೆನು. (ಎಂದು ಬಾಣವನ್ನು ಇಳಿಸುವನು)

ವೈಖಾ—ಪುರುಕುಲತಿಲಕನಾದ ನಿನಗಿದು ತಕ್ಕದ್ದು.

ಕಂದ || ಖ್ಯಾತಪುರುರಾಜಕುಲಸಂ
ಜಾತಂ ನೀಂ ನಿನಗೆ ವಿನಯಮಿಂತಿದು ಸಹಜಂ |
ಈ ತೆರದ ಗುಣವನಾಂತ ವಿ
ನೀತಾತ್ಮನ ಚಕ್ರವರ್ತಿಪುತ್ರನ ಪಡೆಯೈ || ೧೨ ||

ಉಳಿದವರು—(ಕೈಯೆತ್ತಿ) ಸರ್ವಥಾ ಚಕ್ರವರ್ತಿಯಾದ ಪುತ್ರನನ್ನು ಪಡೆ.

ರಾಜಂ—(ನಮಸ್ಕಾರಪೂರ್ವಕವಾಗಿ) ಬ್ರಾಹ್ಮಣವಚನವನ್ನು ಪರಿಗ್ರಹಿಸಿದೆನು.

---

*ಕಂ || ಬಿಡಬೇಡಿದರೊಳ್ಬಾಣವ
ನಿಡುವಂತಿರೆ ಕಿಡಿಯ ಕುಸುಮರಾಶಿಯೊಳಕಟಾ |
ಬಡಮಿಗವಿದೆಲ್ಲಿ ನಿನ್ನಯ
ಸಿಡಿಲಂದದ ಸರಳಿದೆಲ್ಲಿ ನುಡಿ ಮನುಜೇಂದ್ರಾ ||

ವೈಖಾ—ಎಲೈ ರಾಜನೆ! ಸಮಿತ್ತುಗಳನ್ನು ತರುವುದಕ್ಕೆ ಹೊರಟಿರುವೆವು. ಇದೋ ಕುಲಪತಿಗಳಾದ ಕಣ್ವರಾಶ್ರಮವು ಮಾಲಿನೀತೀರದಲ್ಲಿ ಕಾಣುವುದು; ಅವಕಾಶವಿದ್ದಲ್ಲಿ ಅಲ್ಲಿಗೆ ಹೋಗಿ ಆತಿಥ್ಯವನ್ನು ಸ್ವೀಕರಿಸು.

ಕಂದ || ಇನಿಸುಂ ವಿಘ್ನಮದಿಲ್ಲದ
ಮುನಿಗಳ ತಪಮಂ ವಿಲೋಕಿಸುತ್ತಂ ಪೌರ್ವೀ |
ಜನಿತ ಕಿಣವಾಂತ ಮದ್ಭುಜ
ಮೆನಿತೆಡೆಯಂ ಪೊರೆವುದೆಂದು ತಿಳಿವೈ ನೃಪ ನೀಂ || ೧೩ ||

ರಾಜಂ—ಕುಲಪತಿಗಳಾದ ಕಣ್ವರು ಆಶ್ರಮದಲ್ಲಿರುವರೆ?

ವೈಖಾ—ಇಲ್ಲ. ಪುತ್ರಿಯಾದ ಶಕುಂತಳೆಯನ್ನು ಅತಿಥಿಸತ್ಕಾರಕ್ಕೆ ನೇಮಿಸಿ ಆಕೆಯ ಪ್ರತಿಕೂಲದೈವಶಮನಾರ್ಥವಾಗಿ ಸೋಮತೀರ್ಥಕ್ಕೆ ಈಗತಾನೆ ಹೋಗಿರುವರು.

ರಾಜಂ—ಆಗಲಿ, ಆಕೆಯನ್ನು ಕಾಣುವೆನು. ಆ ಮಹರ್ಷಿಗೆ ನನ್ನ ಭಕ್ತಿಯನ್ನು ಆಕೆಯೇ ವಿಜ್ಞಾಪಿಸುವಳು.

ವೈಖಾ—ಇನ್ನು ನಮ್ಮ ಕಾರ್ಯಕ್ಕೆ ಹೋಗುವೆವು. (ಎಂದು ಮೂವರೂ ಹೋಗುವರು.)

ರಾಜಂ—ಎಲೈ ಸಾರಥಿಯೆ! ಕುದುರೆಗಳನ್ನು ನಡೆಸು. ಪುಣ್ಯಾಶ್ರಮದರ್ಶನದಿಂದ ಪವಿತ್ರನಾಗುವೆನು.

ಸೂತಂ—ಆಯುಷ್ಮಂತನಾಜ್ಞೆಯಂತಾಗಲಿ. (ಎಂದು ರಥವನ್ನು ನಡೆಸುವನು)

ರಾಜಂ—(ಎಲ್ಲಾ ಕಡೆಯಲ್ಲಿಯೂ ನೋಡಿ) ಎಲೈ ಸಾರಥಿಯೆ! ಯಾರು ಹೇಳದಿದ್ದರೂ ಇದು ತಪೋವನವೆಂದು ತಿಳಿಯುಬರುವುದು.

ಸೂತಂ—ಅದು ಹೇಗೆ?

ರಾಜಂ—ಇದೇನು, ನೀನು ನೋಡಲಿಲ್ಲವೆ?

ವೃತ್ತ || ಆರಯೆ ಸೂಚಿಕುಂ ಗಿಳಿಗಳಿರ್ಪಗಕೋಟರದಿಂ ಜಗುಳ್ದ ನೀ
ವಾರಮುಮಿಂಗುದೀಫಲವಿಭೇದದೆ ನುಣ್ಪಿಡಿದಿರ್ಪ ಕಲ್ಗಳುಂ |
ತೇರಿನ ಶಬ್ದಮಂ ಸಹಿಸಿ ನಂಬುಗೆಯಿಂ ಸುಳಿವೇಣಬೃಂದಮುಂ
ನಾರುಡೆಯಂಚಿನಿಂದಿಳಿದ ನೀರ್ಗೆರೆಯಾಂತ ತಟಾಕಮಾರ್ಗಮುಂ || ೧೪ ||

ಉ, *ವೃತ್ತ || ಗಾಳಿಯು ಸೋಂಕಿಸಿಂ ಚಲಿಪ ಕಾಲುವೆನೀರೊಳೆ ಧೌತಮೂಲಮಿಾ
ಸಾಲಸಮೂಹಮಿಾ ಕಿಸಲಯಂಗಳ ಕಾಂತಿ ಹುತಾಜ್ಯಧೂಮದಿಂ |
ಕ್ಷಾಳಿತರಾಗಮೇಣಶಿಶುಸಂತತಿ ಲೂನಕುಶಾಂಕುರೋರ್ವಿಯೊಳ್
ಕಾಲನಿಡುತ್ತೆ ಶಂಕೆಯಣಮಿಲ್ಲದೆ ಮೆಲ್ಲನೆ ಮೆಲ್ಲನೈದುಗುಂ || ೧೫ ||

ಸೂತಂ—ನೀನು ಹೇಳಿದ್ದೆಲ್ಲಾ ಸರಿ.

ರಾಜಂ—(ಸ್ವಲ್ಪ ದೂರ ನೋಡಿ) ಎಲೈ ಸೂತನೆ! ತಪೋವನವಾಸಿಗಳಿಗೆ ಬಾಧೆಯುಂಟಾಗಬಾರದು. ಆದ್ದರಿಂದ ಇಲ್ಲೇ ರಥವನ್ನು ನಿಲ್ಲಿಸು. ಇದೊ ಇಳಿಯುವೆನು.

ಸೂತಂ—ಇದೊ ಕಡಿವಾಣವನ್ನು ಹಿಡಿದಿರುವೆನು, ಇಳಿಯಬೇಕು.

ರಾಜಂ—(ಇಳಿದು) ಎಲೈ ಸೂತನೆ! ತಪೋವನಗಳು ಸೌಮ್ಯವೇಷದಿಂದ ಪ್ರವೇಶಿಸುವುದಕ್ಕೆ ಯೋಗ್ಯಗಳು. ಆದ್ದರಿಂದ ಈ ಆಭರಣಗಳನ್ನೂ ಧನುರ್ಬಾಣಗಳನ್ನೂ ಹಿಡಿ. ನಾನು ಆಶ್ರಮವಾಸಿಗಳನ್ನು ನೋಡಿಬರುವಷ್ಟರಲ್ಲಿ ಕುದುರೆಗಳನ್ನು ನೀರಿಗೆ ಬಿಟ್ಟು ಪೃಷ್ಠವನ್ನು ತೊಳೆದು ದಣುವನ್ನಾರಿಸು.

ಸೂತಂ—ಹಾಗೇ ಆಗಲಿ. (ಎಂದು ಹೊರಟುಹೋಗುವನು)

ರಾಜಂ—(ಸ್ವಲ್ಪ ನಡೆದು ನೋಡಿ) ಇದೋ ಆಶ್ರಮದ ಬಾಗಿಲು; ಇದನ್ನು ಪ್ರವೇಶಿಸುವೆನು. (ಎಂದು ಪ್ರವೇಶವನ್ನು ಅಭಿನಯಿಸಿ, ನಿಮಿತ್ತವನ್ನು ಸೂಚಿಸಿ)

†ಕಂದ || ಮುನಿವಸತಿ ನಿರ್ವಿಕಾರಮಿ
ದೆನಗಾದೊಡೆ ತೋಳು ಪಾರ್ವುದಿದಕೆಲ್ಲಿಂದಂ |
ಜನಿಯಿಸುವುದೊ ಸುಫಲಂ ಮೇಣ್
ತನಗಪ್ಪುದು ತಪ್ಪದಕ್ಕುಮೆಲ್ಲೆಡೆಯೊಳಗಂ || ೧೬ ||

ತೆರೆಯಲ್ಲಿ—ಇತ್ತಲಿತ್ತಲ್ ಸಖಿಯರಿರಾ.

---

*ಕಂ || ದೂರದೆ ಕಂಡೊಡೆ ಬೆದರುತೆ
ಪಾರುವ ಮೃಗವಿತತಿ ಬಳಿಯೊಳಾವೈತರೆಯುಂ |
ಸ್ವೈರಿಸುವಿರವಿಂದೇಂ ವಿ
ಸ್ತಾರಿಪುದೊ ದಯಾಪರತ್ವಮಂ ಮುನಿಜನದಾ ||

†ರಾಗ—ಜಂಗಲ. ಆದಿತಾಳ.

ಪದ || ಶಾಂತಮಿದಾಶ್ರಮಪದವಾದೊಡು ಮಿಗೆ ಪಾರುವುದೀ ಬಲದೋಳ್ | ಎಂತಿದ ಕೆತ್ತಣಿನೇಂ ಫಲಮೋ ಬಿಡದೈತಹುದೆಲ್ಲೆಡೆಯೊಳ್ || ಚಿಂತಸಲೇಕಿನ್ನಿದನಾಂ ಪರಿಭಾವಿಸೆ ಭವಿತವ್ಯಂಗಳ್ | ಕಾಂತಾರಮದೇನಂತಃಪುರಮೇಂ ತಾಂ ತಗುಳುವುವಿಳೆಯೊಳ್ ||

ರಾಜಂ—(ಕಿವಿಗೊಟ್ಟು ಕೇಳಿ) ಇದೇನು! ಈ ವೃಕ್ಷವಾಟಿಯ ದಕ್ಷಿಣದಿಕ್ಕಿನಲ್ಲಿ ತರುಣಿಯರ ಸಲ್ಲಾಪ ಕೇಳಿಬರುವಂತಿದೆ. ಅಲ್ಲಿಗೆ ಹೋಗುವೆನು. (ಎಂದು ಮುಂದಕ್ಕೆ ಬಂದು ನೋಡಿ) ಇದೊ! ತಪಸ್ವಿಕನ್ಯೆಯರು ತಮ್ಮ ತಮ್ಮ ಪ್ರಮಾಣಕ್ಕೆ ತಕ್ಕ ಸೇಚನ ಘಟಗಳಿಂದ ಎಳಸಸಿಗಳಿಗೆ ನೀರೆರೆಯುವುದಕ್ಕೆ ಇಲ್ಲೇ ಸಂಚರಿಸುತ್ತಿರುವರು. (ಎಂದು ಚೆನ್ನಾಗಿ ನೋಡಿ) ಆಹ! ಇವರ ರೂಪು ಸ್ವಭಾವದಿಂದ ಮನೋಹರ ವಾಗಿರುವುದು.

ಕಂದ || ಓವೊ ತಪೋವನವಧುಗಳ
ಲಾವಣ್ಯಂ ರಾಣಿವಾಸಕರಿದೆನೆ ಪಡೆಯು |
ಲ್ಕೇವೇಳ್ದಪೆನುದ್ಯಾನಲ
ತಾವಳಿ ವನಲತೆಗಳಿಂ ತಿರಸ್ಕೃತವಲ್ತೇ || ೧೭ ||

ಒಳ್ಳೆಯದು! ಈ ಮರದ ನೆರಳಲ್ಲಿ ಮರೆಯಾಗಿದ್ದು ನೋಡುವೆನು. (ಎಂದು ಮರದ ಮರೆಯಲ್ಲಿ ನಿಂತು ನೋಡುತ್ತಿರುವನು)

(ಶಕುಂತಳೆ ಮೊದಲು ಹೇಳಿದಂತೆ ಸಖಿಯರೊಡನೆ ಜಲಕುಂಭವನ್ನು ತೆಗೆದುಕೊಂಡು ಪ್ರವೇಶಿಸುವಳು)

ಶಕುಂ—ಇತ್ತಲಿತ್ತಲ್ ಸಖಿಯರಿರಾ.

ಅನಸೂಯೆ—*ಎಲೆ ಸಖಿ ಶಕುಂತಳೆ! ನವಮಾಲಿಕಾಕುಸುಮದಂತೆ ಕೋಮಲೆಯಾದ ನಿನ್ನನ್ನೂ ಈ ವೃಕ್ಷಗಳ ಪಾತೆಗೆ ನೀರನ್ನೆರೆಯುವುದಕ್ಕೆ ನೇಮಿಸಿದಕಾರಣ ನಿನ್ನ ತಂದೆಯಾದ ಕಣ್ವರಿಗೆ ನಿನ್ನಲ್ಲಿರುವ ಪ್ರೀತಿಗಿಂತಲೂ ಈ ಆಶ್ರಮವೃಕ್ಷಗಳಲ್ಲಿ ಪ್ರೀತಿ ಹೆಚ್ಚಾಗಿರುವುದೆಂದು ಭಾವಿಸುವೆನು.

ಶಕುಂ—†ಎಲೆ ಅನಸೂಯೆ, ತಂದೆಯ ಆಜ್ಞೆಯೇ ಅಲ್ಲ; ಈ ವೃಕ್ಷಗಳಲ್ಲಿ ನನಗೂ ಸೋದರಸ್ನೇಹವಿರುವುದು. (ಎಂದು ವೃಕ್ಷಗಳಿಗೆ ನೀರೆರೆಯುವಳು)

ರಾಜಂ—ಈಕೆ ಆ ಕಣ್ವರ ಕುವರಿಯೇ! ಈಕೆಯನ್ನು ಆಶ್ರಮಧರ್ಮದಲ್ಲಿ ನೇಮಿಸಿದ ಆ ಕಣ್ವರು ಔಚಿತ್ಯವನ್ನರಿತವರಲ್ಲ; ಏತಕ್ಕೆಂದರೆ—

---

ರಾಗ—ಶಂಕರಾಭರಣದ ನೋಟು. ರೂಪಕತಾಳ.

ಬಿಜಯಂಗೈಯಿತ್ತಲ್ ನೀರಜಮುಖಿಯೆ ಸಖಿಯೇ || ಪ || *ಅನಸೂಯೆ—ತಾತಗೆ ಸಖಿ ನಿನ್ನತ್ತಣಿನೀ ತರುಲತೆಗಳೊಳು | ಪ್ರೀತಿಯು ಪಿರಿದೆನುತೀಕ್ಷಿಪೆನಾತಗೆ ಚಿತ್ತದೊಳು || ೧ || ಏತರಿನೀ ತರುಲತೆಗಳ ಪಾತೆಗೆ ನೀರೆರೆಯೆ | ತಾತನಿನಾಜ್ಞಪ್ತಳೊ ನೀಂ ಜಾತೀ ಕೋಮಲೆಯೆ || ೨ || †ಶಕುಂತಳೆ—ಪಿತನಾಣತಿಯಲ್ಲದೆ ತರುಲತೆಗಳೊಳೆನಗಿಹುದು | ಸುತಸೋದರ ಸೌಹೃದವೀ ಮತಿಯೊಳು ಸಖಿ ಪಿರಿದು || ೩ ||

ಕಂದ || ಇವಳವ್ಯಾಜಮನೋಜ್ಞಿ ಗ
ಡಿವಳಂ ತಪಕೀಡನಾಗಿಸಲ್ಕೆಳಸಿಪರ್ |
ತವಸಿ ನಿಜಮುಜ್ಜುಗಿಪ್ಪಂ
ಕುವಲಯದಳಧಾರೆಯಿಂದೆ ಪೋಳಲ್ ಶಮಿಯಂ || ೧೮ ||

ರಾಜಂ—ಆಗಲಿ ; ಈ ಮರದ ಮರೆಯಲ್ಲಿಯೇ ನಿಂತು ಸಂಬಿಕೆಮಿಗೆ ಈಕೆಯನ್ನು ನೋಡುವೆನು. (ಎಂದು ಮರದ ಮರೆಯಲ್ಲಿ ನಿಂತು ನೋಡುವನು)

ಶಕುಂ—ಎಲೆ ಅನಸೂಯೇ ! ಈ ಪ್ರಿಯಂವದೆಯು ಬಿಗಿಯಾಗಿ ಕಟ್ಟಿದ ವಲ್ಕಲದಿಂದ ನನ್ನ ಎದೆಯು ಬಿಗಿಯುತ್ತಿರುವುದು. ಇದನ್ನು ನೀನು ಸಡಿಲಿಸು.

ಅನ—ಹಾಗೆಯೇ ಆಗಲಿ. (ಎಂದು ಸಡಿಲಿಸುವಳು)

ಪ್ರಿಯಂ—(ನಸುನಕ್ಕು) ಈ ವಿಷಯದಲ್ಲಿ ನನ್ನನ್ನು ಏತಕ್ಕೆ ನಿಂದಿಸುವೆ ? ಎದೆಯನ್ನು ವಿಸ್ತಾರಪಡಿಸುವ ನಿನ್ನ ಯೌವನವನ್ನು ನಿಂದಿಸು.

ರಾಜಂ—ಈಕೆ ಚೆನ್ನಾಗಿ ಹೇಳಿದಳು.

ಕಂದ || ಗುರುಕುಚವಂ ಮುಸುಕುತೆ ಭುಜ
ಶಿರದೊಳ್ ಕುರುಗಂಟನಾಂತ ವಲ್ಕಲದಿಂ ಸುಂ |
ದರಿಯ ತನು ತನ್ನ ಕಾಂತಿಯ
ಪೊರೆಯದು ಬೆಳ್ಳಿಲೆಯ ಮರೆಯ ಕುಸುಮದ ತೆರದಿಂ || ೧೯ ||

ಒಂದುವೇಳೆ ಈ ವಲ್ಕಲವು ಈಕೆಯ ಶರೀರಕ್ಕೆ ಯೋಗ್ಯವಲ್ಲದಿದ್ದರೂ ಕಾಂತಿಯನ್ನುಂಟುಮಾಡಿಯೇ ಮಾಡುವುದು. ಹೇಗೆಂದರೆ,

ವೃತ್ತ || ಶೈವಲದಿಂದೆ ತಾವರೆ ಮುಸುಂಕಿದೊಡಂ ರಮಣೀಯಮಿಂದುವಿಂ
ಗೀವುದು ಕಾಂತಿಯಂ ಮಲಿನಮಾದೊಡಮೇಂ ಕರೆ ವಲ್ಕದಿಂದಿವಳ್ |
ಪ್ರಾವೃತೆಯಾದೊಡಂ ಬಹುಮನೋಜ್ಞೆ ಮನೋಹರವಾದ ರೂಪುಗ
ಳ್ಗಾವುದುತಾನೆ ತಾಳಿದೊಡೆ ಭೂಷಣಮಾಗದೆ ಪೋಪುದುರ್ವಿಯೊಳ್ || ೨೦ ||

ಶಕುಂ—(ಮುಂದೆ ನೋಡಿ) ಎಳದಾದ ಈ ಕೇಸರವೃಕ್ಷವು ಗಾಳಿಯಿಂದ ಚಲಿಸುವ ಚಿಗುರೆಂಬ ಬೆರಳುಗಳಿಂದ ನನ್ನನ್ನು ತ್ವರೆಗೊಳಿಸುವಂತಿದೆ. ಇದನ್ನು ಆದರಿಸುವೆನು. (ಎಂದು ಹೋಗುವಳು)

ಪ್ರಿಯಂ—ಎಲೆ ಶಕುಂತಳೆ, ಇಲ್ಲಿಯೇ ಒಂದು ಮುಹೂರ್ತ ನಿಲ್ಲು.

ಶಕುಂ—ನಿಮಿತ್ತವೇನು ?

ಪ್ರಿಯಂ—ನೀನು ಸಮೀಪದಲ್ಲಿ ನಿಂತಿರುವುದರಿಂದ ಈ ಕೇಸರವೃಕ್ಷವು ಲತೆಯಿಂದ ಕೂಡಿದಂತೆ ಶೋಭಿಸುತ್ತಿರುವುದು.

ಶಕುಂ—ಆದ್ದರಿಂದಲೇ ನಿನ್ನ ಹೆಸರು ಪ್ರಿಯಂವದೆ.

ರಾಜಂ—ಪ್ರಿಯಂವದೆ ಶಕುಂತಳೆಯನ್ನು ಕುರಿತು ಪ್ರಿಯವಾದುದನ್ನೂ ನಿಜವಾಗಿಯೇ ಹೇಳಿದಳು.

ಕಂದ || ತುಟಿ ತಳಿರ್ಗೆ ಸಾಟಿ ಕೋಮಲ
ವಿಟಪಂಗಳನನುಕರಿಸುವುವೀ ನಳಿದೋಳ್ಗಳ್ |
ಕುಟಿಲಾಳಕೆಯ ಶರೀರದೆ
ಘಟಿಸಿದ ಯೌವನವೆ ಸುಮದವೋಲ್ ಸ್ಪೃಹಣೀಯಂ || ೨೧ ||

ಅನ—ಎಲೆ ಶಕುಂತಳೆ, ಎಳಮಾವಿನ ಮರಕ್ಕೆ ಈ ನವಮಾಲಿಕಾಲತೆಯನ್ನು ಸ್ವಯಂವರವಧುವನ್ನಾಗಿ ಮಾಡಿ ಇದಕ್ಕೆ ವನಜ್ಯೋತ್ಸ್ನೆಯೆಂದು ನೀನು ಹೆಸರಿಟ್ಟಿಲ್ಲವೆ? ಇದನ್ನು ಮರೆತೆಯಾ?

ಶಕುಂ—ಈ ಲತೆಯನ್ನು ಮರೆಯುವ ಪಕ್ಷದಲ್ಲಿ ನನ್ನ ಶರೀರವನ್ನೂ ಮರೆಯುವೆನು. (ಎಂದು ಆ ಲತೆಯ ಬಳಿಗೆ ಬಂದು ನೋಡಿ) ಎಲೆ ಪ್ರಿಯಸಖಿ, ನವಕುಸುಮವೆಂಬ ಯೌವನವನ್ನು ಹೊದ್ದಿದ ವನಜ್ಯೋತ್ಸ್ನೆಗೂ ಪಲ್ಲವಿತವಾಗಿರುವುದರಿಂದ ಉಪಭೋಗಕ್ಕೆ ಯೋಗ್ಯವಾದ ಎಳಮಾವಿಗೂ ರಮಣೀಯವಾದ ಕಾಲದಲ್ಲಿ ಸಂಬಂಧವುಂಟಾಯಿತು. (ಎಂದು ನೋಡುತ್ತಾ ನಿಂತಿರುವಳು)

ಪ್ರಿಯಂ—(ನಸುನಕ್ಕು) ಎಲೆ ಅನಸೂಯೆ, ಶಕುಂತಳೆ ಏಕಿಂತು ಈ ವನಜ್ಯೋತ್ಸ್ನೆಯನ್ನು ನೋಡುವಳು ಬಲ್ಲೆಯಾ?

ಅನ—ನಾನರಿಯೆ, ಅದೇನು ಹೇಳು.

ಪ್ರಿಯಂ—ಈ ವನಜ್ಯೋತ್ಸ್ನೆಯು ಅನುರೂಪವಾದ ವೃಕ್ಷವನ್ನು ಹೇಗೆ ಸೇರಿರುವುದೋ, ಹಾಗೆಯೇ ತಾನೂ ತನಗೆ ತಕ್ಕ ವರನನ್ನು ಸೇರಬೇಕೆಂದು.

ಶಕುಂ—(ಅಸೂಯೆಯೊಡನೆ ಕೂಡಿ) ನಿಜ. ಈ ಮನೋರಥ ನಿಮ್ಮ ಮನೋಗತವಾದುದು. (ಎಂದು ನೀರೆರೆಯುವಳು)

ರಾಜಂ—ಕುಲಪತಿಗಳಾದ ಕಣ್ವರಿಗೆ ನಿಜವಾಗಿ ಈಕೆ ಅಸವರ್ಣಸ್ತ್ರೀಯಲ್ಲಿ ಜನಿಸಿರಬಹುದೆ? ಒಂದು ಪಕ್ಷದಲ್ಲಿ ಸಂದೇಹವೇತಕ್ಕೆ?

ವೃತ್ತ || ಎಣಿಸಲ್ ಕ್ಷತ್ರಪರಿಗ್ರಹೋಚಿತೆ ನಿಜಂ ಸಂದೇಹಮಿನ್ನೇತಕೀ
ಫಣಿರಾಡ್ವೇಣಿಯೊಳಾರ್ಯಮೆಂದೆನಿಸಿದೀ ಮನ್ಮಾನಸಂ ನಟ್ಟ ಕಾ |

ರಣದಿಂ ಸಂಶಯಪಾತ್ರವಸ್ತುಗಳೊಳಾದಂ ಸಂತರಾದರ್ಗೆ ಧಾ
ರಿಣಿಯೊಳ್ ತಮ್ಮ ಮನಃಪ್ರವರ್ತನಮೆ ತಾನಕ್ಕುಂ ಪ್ರಮಾಣಂ ವರಂ
|| ೨೨ ||

ಆದರೂ ಪ್ರಮಾಣಾಂತರದಿಂದ ಚೆನ್ನಾಗಿ ವಿಚಾರಮಾಡಿ ಈಕೆಯ ಸಂಗತಿಯನ್ನು ತಿಳಿಯುವೆನು.

ಶಕುಂ—(ತ್ವರೆಪಟ್ಟು) ಓಹೋ! ನೀರೆರೆದುದರಿಂದ ಬೆದರಿ ನವಮಾಲಿಕಾಲತೆಯನ್ನು ಬಿಟ್ಟು ಈ ತುಂಬಿಯು ನನ್ನ ಮುಖಕ್ಕೆ ಎರಗುವುದು. (ಎಂದು ಭೃಂಗಬಾಧೆಯನ್ನು ಅಭಿನಯಿಸುವಳು)

ರಾಜಂ—(ಅಭಿಲಾಷಯುಕ್ತನಾಗಿ ನೋಡಿ) ಭಾಪು, ಈಕೆ ಬಾಧೆಪಡುವುದು ಕೂಡ ರಮಣೀಯವಾಗಿರುವುದು.

ಕಂದ || ತುಂಬಿಯಿದೆರಗಿದ ಕಡೆ ತ
ನ್ನಂಬಕಮಂ ತಿರುಗಿಸುತ್ತೆ ಕಾಮವಿಕಾರ|
ಕ್ಕಿಂಬಾಗದೊಡಂ ಭಯದೆ ನಿ
ತಂಬಿನಿ ನೋಟದ ಬೆಡಂಗ ಕಲಿಯುತ್ತಿರ್ಪಳ್ || ೨೩ ||

(ಅಸೂಯೆಯಿಂದ ಕೂಡಿ)

ವೃತ್ತ || ನಡುಕಂಬೆತ್ತಿರ್ಪಳಂ ಸೋಂಕುವೆಯಡಿಗಡಿಗಂ ಚೆಲ್ಲವೆತ್ತೋರೆನೋಟ
ಮ || ಸ್ರ || ಕ್ಕಡೆಯಾಗೇಕಾಂತಮಂ ಪೇಳ್ವವೊಲೆ ಜಿನುಗುತಿರ್ದಪ್ಪೆ ಕರ್ಣಾಂತದೊಳ್ ಕೈ|
ಗೊಡಹುತ್ತಿರ್ಪಬ್ಜಪತ್ರಾಕ್ಷಿಯ ನವರತಿಸರ್ವಸ್ವಬಿಂಬೋಷ್ಠಮಂ ಮು
ದ್ದಿಡುವೈ ರೋಲಂಬ ನೀನೇ ಕೃತಿ ನಿಜವರಸುತ್ರಾವಣಂ ಕೆಟ್ಟೆವಲ್ತೇ ||

ಶಕುಂ—ಈ ದುಷ್ಟಭೃಂಗವು ಸುಮ್ಮನಿರದು. ಆದುದರಿಂದ ಇನ್ನೊಂದು ಕಡೆಗೆ ಹೋಗುವೆನು. (ಎಂದು ಸ್ವಲ್ಪದೂರ ಹೋಗಿ ನಿಂತು ಸುತ್ತಲೂ ನೋಡಿ) ಇದೇನಿಲ್ಲಿಗೂ ಬಂದಿತು! ಎಲೌ ಸಖಿಯರೆ, ಈ ದುರುದುಂಬಿಯಿಂದ ಬಾಧೆಪಡುವ ನನ್ನನ್ನು ರಕ್ಷಿಸಿ, ರಕ್ಷಿಸಿ.

ಸಖಿಯರು—(ನಸುನಕ್ಕು) ನಿನ್ನನ್ನು ರಕ್ಷಿಸುವುದಕ್ಕೆ ನಾವು ಯಾರು? ದುಷ್ಯಂತನಿಗೆ ಮೊರೆಯಿಡು; ತಪೋವನಗಳು ರಾಜರಕ್ಷಿತಗಳಲ್ಲವೆ?

ರಾಜಂ—ನಾನು ಕಾಣಿಸಿಕೊಳ್ಳುವುದಕ್ಕೆ ಇದೇ ಸಮಯ. ಹೆದರಬೇಡಿ. (ಎನ್ನು

ವಷ್ಟರಲ್ಲಿ ವಿಚಾರಯುಕ್ತನಾಗಿ) ಓಹೊ! ನಾನು ಈ ರೀತಿಯಲ್ಲಿ ಹೋದರೆ ನನ್ನ ರಾಜಭಾವವು ತಿಳಿದೀತು. ಒಳ್ಳೆಯದು; ಹೀಗೆ ಹೇಳುವೆನು.

ಶಕುಂ—(ಒಂದು ಹೆಜ್ಜೆ ಮುಂದಕ್ಕೆ ಸಡೆದು) ಇಲ್ಲಿಗೂ ನನ್ನನ್ನು ಅನುಸರಿಸಿ ಬರುವುದು!

ರಾಜಂ—ಕಂದ || ದುರುಳರ ಶಿಕ್ಷಿಸ ಪುರುಕುಲ
ದರಸಂ ವಸುಮತಿಯ ಪಾಲಿಸುತ್ತಿರಲಾವಂ |
ವಿರಚಿಪಸವಿಸಯಮಂ ನಿ
ರ್ನಿರಮತಿಮುಗ್ಧೆಯರೆನಿಪ್ಪ ಮುನಿಪುತ್ರಿಯರೊಳ್ || ೨೫ ||

(ಎಲ್ಲರೂ ರಾಜನನ್ನು ನೋಡಿ ಸ್ವಲ್ಪ ಭ್ರಾಂತೆಯರಾದಂತೆ ನಟಿಸುವರು)

ಅನ—ಎಲೈ ಆರ್ಯನೆ, ಅಂಥ ಭಯವೇನೂ ಇಲ್ಲ. ನಮ್ಮಾ ಪ್ರಿಯಸಖಿಯು ಭೃಂಗಬಾಧೆಯಿಂದ ಕಾತರಿಸಿದಳು.

ರಾಜಂ—(ಶಕುಂತಳೆಯ ಕಡೆಗೆ ತಿರುಗಿ) ತಪಸ್ಸು ವರ್ಧಿಸುತ್ತಿರುವುದೆ?

ಶಕುಂ—(ಲಜ್ಜೆಯಿಂದ ಸುಮ್ಮನಿರುವಳು)

ಅನ—ಅತಿಥಿವಿಶೇಷಲಾಭದಿಂದ ಈಗ ನಮ್ಮ ತಪಸ್ಸು ವರ್ಧಿಸುವುದು. ಆರ್ಯನಿಗೆ ಸುಖಾಗಮನವೆ? ಎಲೆ ಸಖಿ, ಶಕುಂತಳೆ, ಪರ್ಣಶಾಲೆಗೆ ಹೋಗಿ ಫಲಮಿಶ್ರವಾದ ಅರ್ಘ್ಯವನ್ನು ತೆಗೆದುಕೊಂಡು ಬಾ; ಈ ಕಲಶೋದಕವೇ ಪಾದ್ಯವಾಗುವುದು.

ರಾಜಂ—ನಿಮ್ಮ ಸವಿನುಡಿಗಳಿಂದಲೇ ಸತ್ಕೃತನಾದೆನು.

ಪ್ರಿಯಂ—ಆದರೆ, ಎಲೈ ಆರ್ಯನೆ, ನೆಳಲಿಂದ ತಂಪಾದ ಈ ಏಳೆಲೆಬಾಳೆಯ ಬುಡದ ಜಗಲಿಯಲ್ಲಿ ಕುಳಿತು ಒಂದು ಮುಹೂರ್ತ ವಿಶ್ರಮಿಸಿಕೊಳ್ಳತಕ್ಕುದು.

ರಾಜಂ—ನಿಜ, ಈ ವೃಕ್ಷಕ್ಕೆ ನೀರೆರೆದು ನೀವೂ ಆಯಾಸಪಟ್ಟಿರುವಿರಿ.

ಅನ—ಎಲೆ ಸಖಿ ಶಕುಂತಳೆ, ಅತಿಥಿಗಳನ್ನಾದರಿಸತಕ್ಕುದು ನಮಗೆ ಉಚಿತವಾದ ಕಾರ್ಯ; ಆದುದರಿಂದ ಇಲ್ಲಿ ಕುಳಿತುಕೊಳ್ಳೋಣ. (ಎಂದು ಎಲ್ಲರೂ ಕುಳಿತುಕೊಳ್ಳುವರು)

ಶಕುಂ—(ವಿಚಾರಮಾಡಿ ತನ್ನಲ್ಲಿ ತಾನು) ಇದೇನು! ಈತನನ್ನು ನೋಡಿ ತಪೋವನಕ್ಕೆ ವಿರೋಧಿಯಾದ ವಿಕಾರಕ್ಕೆ ಒಳಗಾದೆನು!

ರಾಜಂ—(ಎಲ್ಲರನ್ನೂ ನೋಡಿ) ಆಹ! ನಿಮ್ಮ ಮೈತ್ರಿಯು ಸಮಾನವಾದ ವಯಸ್ಸಿನಿಂದಲೂ ರೂಪಿನಿಂದಲೂ ರಮಣೀಯವಾಗಿರುವುದು.

ಪ್ರಿಯಂ—(ಮರೆಯಲ್ಲಿ) ಎಲೆ ಅನಸೂಯೆ, ಈತನಾವನು ? ಗಂಭೀರವಾದ ಈತನ ಆಕೃತಿಯನ್ನೂ ಮಧುರಾಲಾಪಗಳನ್ನೂ ನೋಡಿದರೆ ಪ್ರಭುವಿನಂತೆ ಕಾಣುವನು.

ಅನ—ನನಗೂ ಕುತೂಹಲವುಂಟು; ಈತನನ್ನೇ ಕೇಳೋಣ. (ರಾಜನನ್ನು ಕುರಿತು) ಎಲೈ ಆರ್ಯನೆ, ನಿನ್ನ ಸವಿನುಡಿಗಳಿಂದುಂಟಾದ ಸಲುಗೆಯು ನಮ್ಮನ್ನು ಮಾತಾಡುವಂತೆ ಮಾಡುವುದು. ಆರ್ಯನಾದ ನಿನ್ನಿಂದ ಯಾವ ರಾಜವಂಶವು ಅಲಂಕೃತವಾಗಿರುವುದು ? ನಿನ್ನ ವಿಯೋಗದಿಂದ ಯಾವ ದೇಶದ ಜನವು ಕಳವಳ ಪಡುವುದು ? ಸುಕುಮಾರನಾದರೂ ನೀನು ಈ ತಪೋವನಪರಿಶ್ರಮಕ್ಕೆ ಪಾತ್ರನಾಗಲು ಕಾರಣವೇನು ?

ಶಕುಂ—(ಆತ್ಮಗತಂ) ಎಲೆ ಮನಸ್ಸೆ, ಕಳವಳಿಸಬೇಡ ; ನೀನು ಚಿಂತಿಸಿದುದನ್ನು ಈ ಅನಸೂಯೆ ವಿಚಾರಿಸುವಳು.

ರಾಜಂ—(ಆತ್ಮಗತಂ) ಈಗ ನನ್ನ ನಿಜಸ್ಥಿತಿಯನ್ನು ಹೇಗೆ ತಿಳಿಸಲಿ! ಹೇಗೆ ತಾನೇ ಆತ್ಮವಂಚನೆಯನ್ನು ಮಾಡಲಿ! ಒಳ್ಳೆಯದು; ಈಕೆಗೆ ಹೀಗೆ ಹೇಳುವೆನು : (ಪ್ರಕಾಶವಾಗಿ) ಎಲೌ ಪೂಜ್ಯಳೆ, ಪುರುಕುಲದ ಅರಸರಿಂದ ಧರ್ಮಾಧಿಕಾರದಲ್ಲಿ ನಿಯುಕ್ತನಾದ ನಾನು, ಆಶ್ರಮವಾಸಿಗಳ ನಿರ್ವಿಘ್ನವಾದ ಕ್ರಿಯೆಯನ್ನು ತಿಳಿಯು ವುದಕ್ಕೆ ಈ ಧರ್ಮಾರಣ್ಯಕ್ಕೆ ಬಂದಿರುವೆನು.

ಅನ—ಈಗ ಆಶ್ರಮವಾಸಿಗಳು ಸನಾಥರು.

(ಶಕುಂತಳೆ ಶೃಂಗಾರಲಜ್ಜೆಯನ್ನು ತೋರ್ಪಡಿಸುವಳು)

ಸಖಿಯರು—(ಇವರಿಬ್ಬರ ಇಂಗಿತವನ್ನೂ ತಿಳಿದು ಮರೆಯಲ್ಲಿ) ಎಲೆ ಶಕುಂತಳೆ, ಈಗ ಇಲ್ಲಿ ತಂದೆಯಾದ ಕಣ್ವರು ಇದ್ದರೆ—

ಶಕುಂ—(ಕೋಪದೊಡನೆ ಕೂಡಿ) ಇದ್ದರೇನಾಗುತ್ತಿತ್ತು?

ಸಖಿಯರು—ತಮ್ಮ ಜೀವಿತಸರ್ವಸ್ವದಿಂದಲೂ ಈ ಅತಿಥಿಯನ್ನು ಕೃತಾರ್ಥ ನನ್ನು ಮಾಡುತ್ತಿದ್ದರು.

ಶಕುಂ—ಬಿಡಿಬಿಡಿ ; ಮನಸ್ಸಿನಲ್ಲಿ ಏನೋ ಎಣಿಸಿಕೊಂಡು ಮಾತಾಡುತ್ತೀರಿ. ನಿಮ್ಮ ಮಾತನ್ನು ಕೇಳಲಾರೆ.

ರಾಜಂ—ನಾವು ಕೂಡ ನಿಮ್ಮ ಸಖಿಯ ವಿಷಯವಾಗಿ ಸ್ವಲ್ಪ ಕೇಳುವೆವು.

ಸಖಿಯರು—ಆರ್ಯನೆ, ಈ ಪ್ರಾರ್ಥನೆಯು ಅನುಗ್ರಹವಾದಹಾಗೆ.

ರಾಜಂ—ಪೂಜ್ಯರಾದ ಕಣ್ವರು ನಿರಂತರಬ್ರಹ್ಮಚರ್ಯದಲ್ಲಿ ಇರುವರೆಂದು ಪ್ರಸಿದ್ಧಿ. ಈ ನಿಮ್ಮ ಸಖಿಯು ಅವರಿಗೆ ಮಗಳೆಂಬುದು ಹೇಗೆ ?

ಅನ—ಎಲೈ ಆರ್ಯನೆ, ಕೇಳು: ಕೌಶಿಕನೆಂದು ಕುಲದ ಹೆಸರನ್ನು ಪಡೆದಿರುವ ಮಹಾಪ್ರಭಾವವುಳ್ಳ ಒಬ್ಬ ರಾಜರ್ಷಿಯುಂಟು.

ರಾಜಂ—ಉಂಟು, ಕೇಳಿಬಲ್ಲೆನು.

ಅನ—ಅವರನ್ನು ಈ ನಮ್ಮ ಸಖಿಗೆ ಜನಕರೆಂದು ತಿಳಿ. ಅವರಿಂದ ಬಿಡಲ್ಪಟ್ಟ ಈಕೆಯನ್ನು ತಾತ ಕಣ್ವರು ಸಾಕಿದುದರಿಂದ ತಂದೆಯು.

ರಾಜಂ—ಅವರಿಂದ ಬಿಡಲ್ಪಟ್ಟಳೆಂಬ ಮಾತಿನಿಂದ ನನಗೆ ಕುತೂಹಲ ಉಂಟಾಗಿರುವುದು. ಆದಕಾರಣ ಮೊದಲಿನಿಂದ ಕೊನೆಯವರೆಗೂ ಕೇಳಲಿಚ್ಛೈಸುವೆನು.

ಅನ—ಎಲೈ ಆರ್ಯನೆ, ಕೇಳಬೇಕು; ಪೂರ್ವದಲ್ಲಿ ಗೌತಮೀತೀರದಲ್ಲಿ ಉಗ್ರ ತಪಸ್ಸನ್ನು ಆಚರಿಸುತ್ತಿದ್ದ ಆ ರಾಜರ್ಷಿಯ ನಿಯಮವಿಘ್ನಾರ್ಥವಾಗಿ ಭೀತರಾದ ದೇವತೆಗಳಿಂದ ಮೇನಕೆಯೆಂಬ ಅಪ್ಸರಸ್ತ್ರೀಯು ಕಳುಹಿಸಲ್ಪಟ್ಟಳು.

ರಾಜಂ—ಇತರರ ತಪಸ್ಸಿನ ವಿಷಯದಲ್ಲಿ ಈ ಭಯವು ದೇವತೆಗಳಿಗುಂಟೇ ಉಂಟು; ಆಮೇಲೆ?

ಅನ—ಆಮೇಲೆ, ಉತ್ಕೃಷ್ಟವಾದ ವಸಂತಸಮಯದಲ್ಲಿ ಮೋಹಜನಕವಾದ ಆ ಮೇನಕೆಯ ರೂಪಾತಿಶಯವನ್ನು ನೋಡಿ, (ಎಂದು ಅರ್ಧೋಕ್ತಿಯಲ್ಲಿ ಲಜ್ಜೆಯಿಂದ ಸುಮ್ಮನಿರುವಳು)

ರಾಜಂ—ಆಮೇಲೆ ತಿಳಿದೇ ಇದೆ. ಸರ್ವಪ್ರಕಾರದಿಂದಲೂ ಈಕೆ ಅಪ್ಸರಃ ಕನ್ಯಕೆಯೇ?

ಅನ—ಅಹುದು.

ರಾಜಂ—ಒಪ್ಪತಕ್ಕದ್ದು!

ಕಂದ || ಈ ಮಧುರಾಕೃತಿ ಮಾನುಷ
ಕಾಮಿನಿಯರ ಬಸಿರೊಳೆಂತು ಪುಟ್ಟುಗುಮಿಳೆಯೊಳ್ |
ವ್ಯೋಮದೊಳುದಯಿಪ ಮಿಂಚೀ
ಭೂಮಿತಲದತ್ತಣಿಂದದೇಂ ಪುಟ್ಟುಗುಮೇ? || ೨೬ ||

ಶಕುಂ—(ತಲೆಯನ್ನು ತಗ್ಗಿಸಿಕೊಂಡು ನಿಂತಿರುವಳು.)

ರಾಜಂ—(ತನ್ನಲ್ಲಿ ತಾನೆ) ನನ್ನ ಮನೋರಥಕ್ಕೆ ಅವಕಾಶ ದೊರಕಿತು! ಆದರೆ ಸಖಿಯು ಹಾಸ್ಯವಾಗಿ ಆಡಿದ ಈಕೆಯ ವರಪ್ರಾರ್ಥನೆಯನ್ನು ಕೇಳಿ ನನ್ನ ಮನಸ್ಸು ಎರಡು ವಿಧವಾಗಿ ಕಳವಳಿಸುತ್ತಿದೆ.

ಪ್ರಿಯಂ—(ನಸುನಕ್ಕು, ಶಕುಂತಳೆಯನ್ನು ನೋಡಿ ಅರಸನಿಗೆ ಅಭಿಮುಖಳಾಗಿ) ಆರ್ಯನು ಮತ್ತೂ ಏನನ್ನೋ ಆಡಲಿಚ್ಛೈಸುವಂತೆ ತೋರುವುದು.

ಶಕುಂ—(ಸಖಿಯನ್ನು ಬೆರಳಿನಿಂದ ಬೆದರಿಸುವಳು)

ರಾಜಂ—ಪೂಜ್ಯಳಾದ ನೀನು ಚೆನ್ನಾಗಿ ಊಹಿಸಿದೆ. ಸಚ್ಚರಿತ್ರೆಯನ್ನು ಕೇಳಬೇಕೆಂಬ ಆಶೆಯಿಂದ ನಿಮ್ಮನ್ನು ಕೇಳತಕ್ಕದು ಇನ್ನೊಂದೂ ಉಂಟು.

ಪ್ರಿಯಂ—ತಪಸ್ವಿಗಳನ್ನು ಶಂಕೆಯಿಲ್ಲದೆ ಕೇಳಬಹುದಷ್ಟೆ. ಆಲೋಚನೆಯೇತಕ್ಕೆ?

ರಾಜಂ—ನಿಮ್ಮ ಸಖಿಯ ಸಂಗತಿಯನ್ನು ತಿಳಿಯಲಿಚ್ಛೈಸುವೆನು.

ಕಂದ || ಪರಿಣಯಮಪ್ಪನ್ನೆಗಮೀ
ಸರಸಿಜಮುಖಿ ಮದನರೋಧಿನಿಯಮವಸಂಗೀ |
ಕರಿಪಳೊ ತಾನಲ್ಲದೊಡೀ
ಹರಿಣಿಗಳೊಡನಾಡುತೆಂದುಮಾವಾಸಿಪಳೋ ? || ೨೭ ||

ಪ್ರಿಯಂ—ಎಲೈ ಆರ್ಯನೆ, ಧರ್ಮಾಚರಣೆಯಲ್ಲಿಯೂ ಈಕೆ ಪರಾಧೀನೆ; ಈಕೆಯ ತಂದೆಗಾದರೋ, ಈಕೆಯನ್ನು ಅನುರೂಪನಾದ ವರನಿಗೆ ಕೊಡುವ ಸಂಕಲ್ಪವಿರುವುದು.

ರಾಜಂ—(ತನ್ನಲ್ಲಿ ತಾನೆ) ಈ ಪ್ರಾರ್ಥನೆ ಪಡೆಯುವುದಕ್ಕೆ ಅಶಕ್ಯವೇ ?

ಕಂದ || ಎಲೆ ಹೃದಯವೆ ಸಂದೇಹಂ
ತೊಲಗಿದುದಭಿಲಾಷಯುಕ್ತನಾಗಾವುದ ನೀಂ |
ಅಳುಕಿದೆಯೊ ಕೆಂಡವೆನುತದು
ತಳದಿಂ ಮುಟ್ಟಲ್ಕೆ ತಕ್ಕ ನವಮಾಣಿಕ್ಯಂ || ೨೮ ||

ಶಕುಂ—(ಕೋಪಗೊಂಡವಳಂತೆ) ಅನಸೂಯೆ, ನಾನು ಹೋಗುವೆನು.

ಅನ—ನೀನು ಹೋಗುವುದೇತಕ್ಕೆ ?

ಶಕುಂ—ಅಸಂಬದ್ಧವಾಗಿ ಮಾತಾಡುವ ಪ್ರಿಯಂವದೆಯ ನಡತೆಯನ್ನು ಆರ್ಯೆಯಾದ ಗೌತಮಿಗೆ ತಿಳಿಸುವುದಕ್ಕೆ.

ಅನ—*ಎಲೆ ಸಖಿ, ಸತ್ಕಾರವನ್ನು ಹೊಂದಿದ ಅತಿಥಿ ವಿಶೇಷವನ್ನು ಬಿಟ್ಟು ಮನಸ್ಸಿಗೆ ಬಂದಂತೆ ಹೋಗುವುದು ಆಶ್ರಮವಾಸಿಜನಕ್ಕೆ ಯುಕ್ತವಲ್ಲ.

---

* ರಾಗ—ದೇಶಿಕಾಪಿ. ಆದಿತಾಳ.

**ಪೋಗಬೇಡವೆ ಸಖಿ ನೀಂ ಪೋಗಬೇಡವೆ || ಪಲ್ಲವಿ || ಆರ್ಯನು ಬರೆ ಪರಿ | ಚರ್ಯವ ಮಾಡದೆ | ಕಾರ್ಯವಾವುದನಿ | ವಾರ್ಯವೆಮಗೆ ಸಖಿ | ಪೋಗ || ೧ || ಅತಿಥಿವಿಶೇಷವ | ಪತಿಕರಿಸದ ಬಗೆ | ಮತವೇನಾಶ್ರಮ | ಗತರಿಗೆ ಸಖಿ ನೀಂ | ಪೋಗ || ೨ || ಸಮ್ಮತವಲ್ಲಿದು | ನಮ್ಮನುಳಿದು ನೀಂ | ಸುಮ್ಮನೆ ಪೋಗದಿ | ರಮ್ಮ || ಶಕುಂತಳೆ | ಪೋಗ || ೩ ||**

ಶಕುಂ—(ಯಾವುದನ್ನೂ ಆಡದೆ ಹೊರಡುವಳು)

ರಾಜಂ—(ಆಕೆಯನ್ನು ಹಿಡಿಯಲಿಚ್ಛೈಸಿ, ಮನಸ್ಸನ್ನು ತಡೆದು, ತನ್ನಲ್ಲಿ ತಾನೇ) ಆಹ! ಕಾಮಿಗಳ ಮನೋವ್ಯಾಪಾರವು ಚೇಷ್ಟೆಗೆ ಪ್ರತಿರೂಪವಾದುದು. ಏತಕ್ಕೆಂದರೆ—

ಕಂದ || ಮುನಿಸುತೆಯನನುಸರಿಸುತೊಡ
ನನುಸಯದಿಂ ಪೋಪುದಲ್ಲವೆಂದಿರ್ದೆಡೆಯಿಂ |
ದಿನಿಸುಂ ಚಲಿಸದೊಡಂ ತ
ದ್ವನಿತೆಯ ಬಳಿಗೈದಿ ಮಗುಳ್ದುಬಂದವೊಲಾದೆಂ || ೨೯ ||

ಪ್ರಿಯಂ—(ಶಕುಂತಳೆಯನ್ನು ತಡೆದು) ಎಲೆ ಸಖಿ, ಹೋಗುವುದು ನಿನಗುಚಿತವಲ್ಲ.

ಶಕುಂ—(ಹುಬ್ಬನ್ನು ಗಂಟಿಕ್ಕಿ) ಏತಕ್ಕೆ ಹೋಗಬಾರದು ?

ಪ್ರಿಯಂ—ಸಸಿಗಳಿಗೆ ಎರಡು ಸಾರಿ ನೀರೆರೆಯುವ ಸಾಲವನ್ನು ಹೊತ್ತಿರುವೆ. ಆದುದರಿಂದ ಅದನ್ನು ತೀರಿಸಿಕೊಂಡು ಹೋಗುವೆ, ಬಾ. (ಎಂದು ಬಲಾತ್ಕಾರದಿಂದ ಎಳೆಯುವಳು)

ರಾಜಂ—ಎಲೆ ಕಾರುಣ್ಯಾವತಿಯೆ, ಗಿಡಗಳಿಗೆ ನೀರೆರೆದುದರಿಂದಲೇ ಈಕೆ ಇಷ್ಟು ಆಯಾಸಪಟ್ಟಿರುವಂತೆ ಎಣಿಸುವೆನು ; ಹಾಗೆಯೇ ಸರಿ. ಈಕೆಯ

ವೃತ್ತ || ಕಲಶೋತ್ಕ್ಷೇಪಣದಿಂ ಕರಂ ಕರತಲಂ ಕೆಂಪಾಂತು ತೋರ್ಕುಂ ಕುಚಂ
ಗಳೊಳಿನ್ನುಂ ಮಿತಿಮೀರಿ ಬರ್ಪ ನಿಡುಸುಯ್ಗಳ್ ಕಂಪಮಂ ಪುಟ್ಟಿಕುಂ
ವಿಳಸತ್ಕರ್ಣಶಿರೀಷರೋಧಿ ಬೆಮರಾದಂ ವಕ್ತ್ರದೊಳ್ ನಿಂದುದಾ
ಕುಲಮಾಯ್ತೊರ್ತಳದಿಂದೆ ಕಟ್ಟಿದುದರಿಂ ಬಿರ್ಚಿರ್ದ ಕೇಶೋತ್ಕರಂ ||

ಆದುದರಿಂದ ಈಕೆಯ ಸಾಲವನ್ನು ನಾನು ತೀರಿಸುವೆನು. (ಎಂದು ಉಂಗುರವನ್ನು ಕೊಡುವುದಕ್ಕೆ ಇಚ್ಛೈಸುವನು)

ಸಖಿಯರು—(ಉಂಗುರದಲ್ಲಿ ಕೆತ್ತಿರುವ ನಾಮಾಕ್ಷರಗಳನ್ನು ಓದಿಕೊಂಡು ಒಬ್ಬರನ್ನೊಬ್ಬರು ನೋಡುವರು)

ರಾಜಂ—ಈ ಉಂಗುರದ ದೆಸೆಯಿಂದ ನನ್ನನ್ನು ಬೇರೆಯೆಣಿಸಬೇಡಿರಿ ; ನಾನು ರಾಜಸಂಬಂಧಿಯಾದ ಪುರುಷನು.

ಪ್ರಿಯಂ—ಹಾಗಾದರೆ ಈ ಉಂಗುರವು ಆರ್ಯನ ಅಂಗುಲಿಯನ್ನು ಅಗಲಕೂಡದು. ಆರ್ಯನ ಮಾತಿನಿಂದಲೆ ಈಕೆ ಈಗ ಋಣವಿಮುಕ್ತೆಯಾದಳು. (ಸ್ವಲ್ಪ ಶಕುಂತಳೆಯ

ಕಡೆಗೆ ತಿರುಗಿ) ಎಲೆ ಶಕುಂತಳೆ, ಕರುಣಾಳುವಾದ ಆರ್ಯನಿಂದ ಅಥವಾ ಮಹಾರಾಜನಿಂದ ಬಿಡುಗಡೆಯನ್ನು ಹೊಂದಿದೆ; ಇನ್ನು ಹೋಗು.

ಶಕುಂ—(ತನ್ನಲ್ಲಿ ತಾನು) ಹೋಗುವುದು ನನ್ನ ಕೈಯಲ್ಲಾಗುವುದಾದರೆ! (ಪ್ರಕಾಶವಾಗಿ) ನನ್ನನ್ನು ಬಿಡುವುದಕ್ಕೂ ತಡೆಯುವುದಕ್ಕೂ ನೀನಾವಳು?

ರಾಜಂ—(ಶಕುಂತಳೆಯನ್ನು ನೋಡಿ ತನ್ನಲ್ಲಿ ತಾನು) ಈಕೆಯಲ್ಲಿ ನಾವು ಹೇಗೊ, ನಮ್ಮಲ್ಲಿ ಈಕೆಯೂ ಹಾಗೆಯೇ ಇರುವಳೆ? ಒಂದುವೇಳೆ ನನ್ನ ಕೋರಿಕೆ ಕೈಗೂಡಿದಂತೆ ಕಾಣುವುದು. ಏತಕ್ಕೆಂದರೆ—

ಕಂದ || ನುಡಿಯುತ್ತಿರೆ ನಾಂ ನುಡಿಯಳ್
ಕುಡುವಳ್ ಕಿವಿಯುಂ ಮದುಕ್ತಿಗವಲೋಕಿಸೆ ನಾ|
ನೊಡನೆ ತಲೆವಾಗಿಪಳ್ ಕ
ಣ್ಗಡೆಯುಂ ಪಿರಿದಿತರವಿಷಯದೊಳಗಿಡಳಾದಂ || ೩೧ ||

ತೆರೆಯಲ್ಲಿ—ಎಲೆ ಎಲೆ, ತಪಸ್ವಿಗಳಿರಾ! ತಪೋವನಪ್ರಾಣಿಗಳ ರಕ್ಷಣೆಗೋಸ್ಕರ ಸನ್ನದ್ಧರಾಗಿ! ಬೇಟೆಯಾಡುತ್ತ ಒಂದ ದುಷ್ಯಂತಮಹಾರಾಜನು ನಿಮ್ಮ ಸಮೀಪದಲ್ಲಿರಬೇಕಷ್ಟೆ!

ಕಂದ || ಸಳಿಳದೊಳೆ ನಾಂದ ವಲ್ಕಂ
ದಳೆದಾಶ್ರಮತರುಗಳಲ್ಲಿ ಹಯಖುರಹತಿಯಿಂ|
ದಳುರ್ದೆಳ್ದ ಧೂಳಿ ಪರಿಣತ
ಜಳಜಸಖಾಭಂ ಪತಂಗತತಿವೊಲ್ ಬೀಳ್ಗುಂ || ೩೨ ||

ಮ ಸ್ರ.
ವೃತ್ತ || ಪರವುತ್ತಂ ಪುಲ್ಲೆಗುಂಪಂ ಪದಕೆ ತೊಡರ್ದ ಪೆರ್ಬಳ್ಳಿಗಳ್ ಪಾಶದಂತೊ
ಪ್ಪಿರೆ ನೋಡಲ್ ಪೊಯ್ಲು ಒಲ್ಪಿಂ ಮುರಿದ ಮರದ ಪೆರ್ಗೊಂಬಿನೊಳ್ ಕೊಂಬದೊಂದಂ|
ಟಿರೆ ಧರ್ಮಾರಣ್ಯಮಾರ್ಗಂಬಿಡಿದುರದೆ ತಪೋವಿಘ್ನವೇ ಮೂರ್ತಿವೆತ್ತಂ
ತಿರೆ ಸೊರ್ಕಾಂತಾನೆಯೈತಂದಪುದು ನೃಪರಥಾಲೋಕದಿಂದಂಜುತೀಗಳ್ ||

(ಎಲ್ಲರೂ ಕಿವಿಗೊಟ್ಟು ಕೇಳಿ ಸ್ವಲ್ಪ ಸಂಭ್ರಾಂತೆಯರಾದಂತೆ ಇರುವರು)

ರಾಜಂ—(ತನ್ನಲ್ಲಿ ತಾನು) ಓಹೋ! ಛಿ! ಪುರಜನರು ನನ್ನನ್ನು ಹುಡುಕುತ್ತ ಬಂದು ತಪೋವನವನ್ನು ಮುತ್ತುವರು; ಆಗಲಿ ಹೋಗುವೆನು.

ಅನ—ಎಲೈ ಆರ್ಯನೆ, ಆನೆಯ ವೃತ್ತಾಂತದಿಂದ ಕಳವಳಪಟ್ಟಿರುವೆವು. ಪರ್ಣಶಾಲೆಗೆ ಹೋಗುವುದಕ್ಕೆ ಅನುಜ್ಞೆಗೊಡು.

ರಾಜಂ—ನೀವು ಹೋಗಿರಿ; ನಾವೂ ಕೂಡ ಆಶ್ರಮಕ್ಕೆ ಬಾಧೆಯುಂಟಾಗದ ಹಾಗೆ ಪ್ರಯತ್ನಿಸಹೋಗುವೆವು.

(ಎಲ್ಲರೂ ಏಳುವರು)

ಸಖಿಯರು—ಆರ್ಯನೆ, ಸತ್ಕಾರವನ್ನು ಹೊಂದದ ನಿನ್ನನ್ನು ಪುನಶ್ಚ ನೋಡುವ ನಿಮಿತ್ತವಾಗಿ ಆರ್ಯನಿಗೆ ವಿಜ್ಞಾಪಿಸುವುದಕ್ಕೆ ಲಜ್ಜಿಪಡುವೆವು.

ರಾಜಂ—ಹೀಗೆನ್ನಬೇಡಿ; ನಿಮ್ಮ ದರ್ಶನದಿಂದಲೇ ಸತ್ಕೃತನಾದೆನು.

ಶಕುಂ—ಎಲೆ ಅನಸೂಯೆ, ಸೂಜಿಯಂತಿರುವ ದರ್ಭೆಯ ತುದಿಯು ನನ್ನ ಕಾಲಿಗೆ ಚುಚ್ಚಿತು; ಇದಲ್ಲದೆ ಈ ಗೋರಂಟಿ ಮರದ ಕೊನೆಗೆ ನನ್ನ ನಾರ ಸೀರೆಯ ಸೆರಗು ಸಿಕ್ಕಿತು; ಬಿಡಿಸಿಕೊಂಡು ಬರುವ ಪರ್ಯಂತ ನನ್ನನ್ನು ಕಾದಿರಿ. (ಎಂದು ರಾಯನನ್ನೇ ನೋಡುವ ನೆವದಿಂದ ತಡಮಾಡುತ್ತಾ ಸಖಿಯರೊಡನೆ ಹೊರಟು ಹೋಗುವಳು)

*ರಾಜಂ—ನನಗೆ ಪಟ್ಟಣಕ್ಕೆ ಹೋಗುವ ಕುತೂಹಲವು ಕಿರಿದಾಯಿತು. ನನ್ನ ಹಿಂದೆ ಬಂದವರ ಬಳಿಗೆ ಹೋಗಿ ತಪೋವನಕ್ಕೆ ಅತಿದೂರವಲ್ಲದ ಸ್ಥಳದಲ್ಲಿ ಇಳಿಸುವೆನು. ನಾನಾದರೋ ಶಕುಂತಳೆಯ ಅನುರಾಗಚೇಷ್ಟೆಯ ದೆಸೆಯಿಂದ ನನ್ನ ಮನಸ್ಸನ್ನು ಹಿಂದಿರುಗಿಸಲಾರೆನು.

*ಕಂದ || ಮುಂದಕೆ ಪೋಪುದು ತನುವಿದು
ಪಿಂದೆಸೆಗೋಡುವುದು ಬಳಕೆಗೈದದ ಮನವೇ |
ನೆಂದಪೆನೊ ಪವನನಿದಿರೊಳ್
ತಂದ ಪತಾಕಿಕೆಯ ಚೀನವಸನಮಿದೆಂಬೊಲ್ || ೩೪ ||

---

* ರಾಗ—ನೀಲಾಂಬರಿ. ತ್ರಿಪುಟತಾಳ.

ಕಾಂತೆಯನುಳಿದೆಂತು ಪೋಪೆಂ | ಚಿಂತೆಯ ಸೈಪೆಂ || ಪ || ದಂತಿವಾರ್ತೆಯೊಳಂಜಿ ತನ್ನದೃ | ಗಂತದಿಂದೀಕ್ಷಿಸುತ ಪ್ರಿಯೆ ಪೋಗೆ | ಬಂದುದೀ ಬೇಗೆ || ಅನು || ಕೆಳದಿಯರೊಳು ನೆವವಾಂತು | ಅಲ್ಲಲ್ಲಿ ನಿಂತು ತಳರುತಲಿ ಪಿಂದಿರುಗಿದರಸಿಯ | ವಲಿತಕಂಧರವಾದ ವದನೇಂದು ವೆದೆಯೊಳಿದೆ ನಿಂದು || ೧ || ನಗರೀಗಮನವೆನ್ನ ಬಗೆಗೆ | ಬಾರದೀಗಳಿಗೆ | ಯುಗದ ಪರಿಯಲಿ ತೋರ್ಪುದೆಂದಿಗೆ | ಬೊಗಸೆಗಣ್ಣಿನ ಮುಗುದೆಯನು ನೋಳ್ಪೆ | ನಿನ್ನಾರ ಬೇಳ್ಪೆ || ೨ || ಪೋಗುವುದೊಡಲಿದು ಮುಂದೆ | ಹೃದಯವಿದು ಹಿಂದೆ | ಬೇಗೆ ನೋಡುವುದಿದಿರುಗಾಳಿಯೊಳ್ | ಸಾಗಿಸುವ ಪಳವಿಗೆಯ ಪಟದಂತೆ | ಏಗೈವೆ ಮುಂತೆ || ೩ ||

# ದ್ವಿತೀಯಾಂಕಂ

(ಬಳಿಕ ದುಃಖಿತನಾದ ವಿದೂಷಕನು ಪ್ರವೇಶಿಸುವನು)

ವಿದೂಷಕ—*(ಸಿಟ್ಟು ಸಿರಸ್ಸು ಜಟ್ಟು) ಅಯ್ಯೋ ದೈವವೇ! ಬೇಟೆಯಲ್ಲೇ ಆಸಕ್ತನಾದ ಈ ರಾಯನ ಸ್ನೇಹದಿಂದ ಕೆಟ್ಟೆನಲ್ಲಾ! ಇದೋ ಹುಲ್ಲೆ! ಇದೋ ಹಂದಿ! ಇದೋ ಹುಲಿ! ಎನ್ನುತ್ತಾ ಮಧ್ಯಾಹ್ನದಲ್ಲಿಯೂ ಬೇಸಗೆಯಿಂದ ದಟ್ಟವಾಗಿ ಮರದ ನೆರಳಿಲ್ಲದ ಅಡವಿಗಳಲ್ಲಿ ಸುತ್ತಿ ಸಾಕಾಯಿತು! ಉದುರಿದೆಲೆಗಳಿಂದ ಒಗರಾಗಿ ಬೆಚ್ಚಗಿರುವ ಬೆಟ್ಟದ ಜೋಗಿನ ನೀರುಗಳನ್ನೆಲ್ಲಾ ಕುಡಿದುದಾಯಿತು. ಇದು ಹೊರತಾಗಿ ಹೊತ್ತುಗೊತ್ತಿಲ್ಲದೆ ಸುಟ್ಟಮಾಂಸವೇ ಹೆಚ್ಚಾಗಿರುವ ಆಹಾರವು ಭುಂಜಿಸಲ್ಪಟ್ಟಿತು; ಕುದುರೆಯ ಹಿಂದೋಡಿ ಶರೀರದ ಕೀಲುಗಳೆಲ್ಲಾ ಸಡಿಲಿ ನೋವಿನಿಂದ ರಾತ್ರಿಯಲ್ಲಿಯೂ ನಾನು ಚೆನ್ನಾಗಿ ಮಲಗಲಿಲ್ಲ. ಆಮೇಲೆ ಬೆಳಕು ಹರಿಯುವುದಕ್ಕಿಂತ ಮುಂಚೆಯೇ ಅರಣ್ಯವನ್ನು ಆಕ್ರಮಿಸುವ ತೊತ್ತಿನ ಮಕ್ಕಳಾದ ಹಕ್ಕಿಯ ಬೇಟೆಗಾರರ ಕಲಕಲಧ್ವನಿಯಿಂದ ಎಚ್ಚರವಾಯಿತು; ಇಷ್ಟಾದರೂ ಇನ್ನೂ ಕಷ್ಟ ತಪ್ಪಲಿಲ್ಲ! ಈಚೆಗೆ ಕುರುಪಿನ ಮೇಲೆ ಬೊಕ್ಕೆಯೆದ್ದಂತಾಯಿತು. ನೆನ್ನೆಯ ದಿವಸ ನಮ್ಮನ್ನು ಹಿಂದೆ ಬಿಟ್ಟು ಹುಲ್ಲೆಯನ್ನು ಅಟ್ಟಿಕೊಂಡು ಆಶ್ರಮವನ್ನು ಹೊಕ್ಕ ನಮ್ಮ ರಾಯನಿಗೆ ನನ್ನ ದುರದೃಷ್ಟವು ಶಕುಂತಳೆಯೆಂಬವಳನ್ನು ಬೇರೆ ತೋರಿಸಿತು. ಈಗ ನಮ್ಮ ರಾಯನು ಊರಿಗೆ ಹೋಗುವ ಸಮಾಚಾರವನ್ನೇ ಎತ್ತುವುದಿಲ್ಲ. ಈಗಲೂ ಆ ಸಂಗತಿಯನ್ನೇ ಚಿಂತಿಸುತ್ತಿರುವ ನನಗೆ ಕಣ್ಣುಗಳನ್ನು ಬಿಟ್ಟುಕೊಂಡಿದ್ದ ಹಾಗೆಯೇ ಬೆಳಗಾಯಿತು. ಮಾಡತಕ್ಕದೇನು? ಪ್ರಾತಃಕಾಲದ ಕಾರ್ಯಗಳನ್ನು ಮುಗಿಸಿಕೊಂಡು ಬರುವ ಆತನನ್ನು ಯಾವಾಗ ಕಂಡೇನು? (ಸ್ವಲ್ಪ ನಡೆದು ನೋಡಿ) ಇದೋ ಕಾಡುಹೂಗಳನ್ನು ಮುಡಿದು ಕೈಯಲ್ಲಿ ಬಿಲ್ಲನ್ನು ಹಿಡಿದು-ಕೊಂಡಿರುವ ಯವನಸ್ತ್ರೀಯರ ಗುಂಪಿನಿಂದ ಪರಿವೃತನಾಗಿ ಈ ಕಡೆಯೇ ನನ್ನ

---

* ರಾಗ—ಧೀರಶಂಕರಾಭರಣ ನೋಟು. ಆದಿತಾಳ.

**ವಿದೂಷಕ—ಹಾಹಾ ಇದೇನಿದು | ಮೋಹವಾದುದು || ಊಹೆಗೈಯದಲರಸನೊಡನೆ | ಸ್ನೇಹವಾಂತುದು || ಪ || ಎಲ್ಲಿ ನೋಡುವೆ | ಎಲ್ಲಿ ಗೈದುವೆ || ಹುಲ್ಲೆಯೊಡನೆ ಹೋದ ನೃಪನ | ನೆಲ್ಲಿ ಹುಡುಕುವೆ || ೧ || ಹೊತ್ತು ಹೊತ್ತಿಗೆ | ತುತ್ತು ಬಾಯಿಗೆ | ಇತ್ತ ಕಾಣೆ ಹತ್ತಿತು ಬಲು | ಪಿತ್ತನೆತ್ತಿಗೆ || ೨ || ಬೇಡಬೇಡವು | ಬೇಟೆಯಾಟವು || ಕಾಡುತಿರುಗಿ ಮೈ ಬಾಡಿತೆಲ್ಲವು || ೩ ||**

ಮಿತ್ರನು ಬರುವನು. ಆಗಲಿ; ಅಂಗಭಂಗವಿಕಲನಂತೆ ನಿಂದಿರುವೆನು. ಹೀಗಾದರೆ ತಾನೆ ವಿಶ್ರಾಂತಿಯನ್ನು ಹೊಂದಬಹುದು. (ಎಂದು ದೊಣ್ಣೆಯನ್ನು ಊರಿಕೊಂಡು ನಿಲ್ಲುವನು)

ಇದು ಪ್ರವೇಶಕ

---

(ಅನಂತರ ಪೂರ್ವೋಕ್ತ ಪರಿವಾರದೊಡನೆ ರಾಜನು ಪ್ರವೇಶಿಸುವನು)

ರಾಜಂ—ಕಂದ || ಮುನಿತನಯೆ ಸುಲಭೆಯಲ್ಲಂ
ಮನವಾದೊಡೆ ಕಳವಳಿಪುದು ತದ್ಭಾವಾಲೋ |
ಕನದಿಂ ಕಾಮಂ ಸಾರ್ಥಕ
ನೆನಿಸದೊಡಂ ಮಾಳ್ಪುದಿರ್ವರಾಸೆಯೆ ರತಿಯಂ || ೩೫ ||

(ನಸುನಕ್ಕು) ಇಷ್ಟಜನದ ಚಿತ್ತವೃತ್ತಿಯನ್ನು ತನ್ನ ಅಭಿಪ್ರಾಯಕ್ಕೆ ಅನುಸಾರಿಣಿಯನ್ನಾಗಿ ಹೀಗೆ ಕಲ್ಪಿಸಿಕೊಳ್ಳುವ ಕಾಮುಕನು ಹಾಸ್ಯಕ್ಕೆ ಗುರಿಯಾಗುವನು. ಹಾಗೆಯೇ ಸರಿ—

ವೃತ್ತ || ಬೇರೆಡೆಯಿಟ್ಟ ದಿಟ್ಟಿಯಿನಪೇಕ್ಷಿಸುವಾಕೆಯ ನೇಹನೋಟಮುಂ
ತೋರನಿತಂಬಭಾರಕಲಸುತ್ತವೆ ಪೋಪಳ ಮಂದಯಾನಮುಂ |
ನಾರದಿರೆಂದ ತನ್ನ ಸಖಿಗುತ್ತರಮಂ ಮುನಿದಾಕೆಯಿತ್ತುದಂ
ತೋರಿದುದೆನ್ನದಾಗಹಹ ಕಾಮುಕನೀಕ್ಷಿಪನಲ್ತೆ ಸ್ವೈಜಮಂ || ೩೬ ||

ವಿದೂ—(ಮೊದಲಿನಂತೆ ದಂಡವನ್ನು ಊರಿಕೊಂಡು ನಿಂತು) ಎಲೈ ಮಿತ್ರನೆ, ನನ್ನ ಕೈಕಾಲುಗಳನ್ನು ಆಡಿಸಲಾರೆನು. ಆದುದರಿಂದ ಬಾಯಮಾತಿನಿಂದಲೇ ಹರಸುವೆನು; ಜಯಶೀಲನಾಗು.

ರಾಜಂ—ಏತರಿಂದ ನಿನ್ನ ಶರೀರಕ್ಕೆ ಈ ವಿಕಾರವುಂಟಾಯಿತು?

ವಿದೂ—ಏತರಿಂದಲೆ? ತಾನೇ ಕಣ್ಣು ಚುಚ್ಚಿ ಕಣ್ಣೀರು ಏತರಿಂದ ಬಂತೆಂದು ಕೇಳುವೆ? ಚೆನ್ನಾಯಿತು! ಚೆನ್ನಾಯಿತು!!

ರಾಜಂ—ನಾನರಿಯೆನು; ಸ್ಪಷ್ಟವಾಗಿ ಹೇಳು.

ವಿದೂ—ಎಲೈ ಮಿತ್ರನೆ, ನೀರಹಬ್ಬೆಗಿಡ ಬಾಗಿರುವುದು ತನ್ನ ಪ್ರಭಾವದಿಂದಲೋ ಅಥವಾ ನದೀವೇಗದ ಪ್ರಭಾವದಿಂದಲೋ?

ರಾಜಂ—ನದೀವೇಗದ ಪ್ರಭಾವದಿಂದ.

ವಿದೂ—ನಾನು ಹೀಗಾದುದೂ ನಿನ್ನ ಪ್ರಭಾವದಿಂದ.

ರಾಜಂ—ಅದು ಹೇಗೆ ?

ವಿದೂ—ಹೀಗೆ: ನೀನು ರಾಜಕಾರ್ಯಗಳನ್ನು ಬಿಟ್ಟು ಮನುಷ್ಯಸಂಚಾರವಿಲ್ಲದ ಇಂಥ ಕಾಡಿನಲ್ಲಿ ಕಾಡುಮನುಷ್ಯನಂತೆ ತಿರುಗುತ್ತಿರುವೆ; ನಿಜವಾಗಿ ಪ್ರತಿದಿನವೂ ದುಷ್ಟಜಂತುಗಳನ್ನು ಓಡಿಸುವುದರಿಂದ ನನ್ನ ಶರೀರದ ಕೀಲುಗಳೆಲ್ಲಾ ಸಡಿಲಿ ನೋವಾಗಿ ನನ್ನ ಅಂಗಗಳೇ ನನಗೆ ಸ್ವಾಧೀನವಿಲ್ಲದಹಾಗಾಯಿತು; ಆದುದರಿಂದ ನೀನು ದಯಮಾಡಿ ಒಂದುದಿನವಾದರೂ ವಿಶ್ರಮಿಸಿಕೊಳ್ಳುವುದಕ್ಕೆ ನನ್ನನ್ನು ಬಿಡಬೇಕೆಂದು ಬೇಡಿಕೊಳ್ಳುವೆನು.

ರಾಜಂ—(ತನ್ನಲ್ಲಿ ತಾನು) ಇವನೂ ಹೀಗೆ ಹೇಳುವನು; ಕಣ್ವಪುತ್ರಿಯನ್ನು ನೆನೆದು ನನಗೂ ಬೇಟೆಯಲ್ಲಿ ಮನಸ್ಸು ಬೇಸರಪಟ್ಟಿರುವುದು.

ಕಂದ || ಕಣೆದೊಟ್ಟು ಹರಿಣಗಣದೊಳ್
ಮಣಿಯಿಸಲಾರೆಂ ಗುಣಾಂಕಚಾಪವನದು ಪೆ |
ಣ್ಮಣಿಗೆ ಸವಿನೋಟಮುಂ ತಾಂ
ಪ್ರಣಯದಿನೊಡನಿರ್ದು ಕಲಿಸಿದಂತಿರಲರಿದಾಂ || ೩೭ ||

ವಿದೂ—(ಅರಸನ ಮುಖವನ್ನು ನೋಡಿ) ನೀನು ಮನಸ್ಸಿನಲ್ಲಿ ಏನೋ ಇಟ್ಟುಕೊಂಡು ಆಲೋಚಿಸುವಂತೆ ಕಾಣುವುದು; ನಾನು ಅರಣ್ಯದಲ್ಲಿ ಅತ್ತ ಹಾಗಾಯಿತು !

ರಾಜಂ—(ನಸುನಕ್ಕು) ಮತ್ತೇನೂ ಅಲ್ಲ; ಮಿತ್ರನ ಮಾತು ಮೀರತಕ್ಕುದಲ್ಲ ವೆಂದು ಸುಮ್ಮನಿದ್ದೆನು.

ವಿದೂ—ಬಹುಕಾಲ ಬದುಕು. (ಎಂದು ಹೋಗುವುದಕ್ಕೆ ಯತ್ನಿಸುವನು)

ರಾಜಂ—ಎಲೈ ಮಿತ್ರನೇ, ನಿಲ್ಲು; ನನ್ನ ಮಾತು ಇನ್ನೂ ಮುಗಿಯಲಿಲ್ಲ.

ವಿದೂ—ಅದೇನು ಅಪ್ಪಣೆಯಾಗಲಿ.

ರಾಜಂ—ನೀನು ವಿಶ್ರಮಿಸಿಕೊಂಡು ಅನಾಯಾಸಕರವಾದ ಒಂದು ಕಾರ್ಯದಲ್ಲಿ ನನಗೆ ಸಹಾಯಕನಾಗಬೇಕು.

ವಿದೂ—ಏನು, ಕಡುಬು ಮೆಲ್ಲುವುದರಲ್ಲೋ ?

ರಾಜಂ—ನಾನು ಹೇಳುವುದರಲ್ಲಿ.

ವಿದೂ—ಇದೋ ತೆಪ್ಪಗಿರುವೆನು.

ರಾಜಂ—ಅದು ಯಾರು ಹೊರಗೆ ?

ದ್ವಾರಪಾಲಕ—(ಒಂದು) ಸ್ವಾಮಿ, ಆಜ್ಞಾಪಿಸಬೇಕು.

ರಾಜಂ—ಎಲೈ ರೈವತಕನೆ, ಸೇನಾಪತಿಯನ್ನು ಕರೆದುಕೊಂಡು ಬಾ.

ದ್ವಾರಪಾಲಕ—ಮಹಾರಾಜನಾಜ್ಞೆ. (ಎಂದು ಹೋಗಿ ಸೇನಾಪತಿಯೊಡನೆ ಪುನಃ ಬಂದು) ಎಲೈ ಆರ್ಯನೆ, ಇದೋ ನಮ್ಮ ಮಹಾರಾಜನು ಆಜ್ಞಾಪಿಸುವುದಕ್ಕೆ ಕುತ್ತಿಗೆಯನ್ನು ಎತ್ತಿಕೊಂಡು ಇತ್ತಲೇ ನೋಡುತ್ತ ನಿಂದಿರುವನು; ಸಮೀಪಕ್ಕೆ ಹೋಗು.

ಸೇನಾಪತಿ—(ರಾಜನನ್ನು ನೋಡಿ) ಮೃಗದ ಬೇಟೆಯು ದುಷ್ಟವಾದಾಗ್ಯೂ ನಮ್ಮ ರಾಯನಲ್ಲಿ ಪ್ರಯೋಜನಕಾರಿಯೇ ಆಯಿತು. ಹಾಗೆಯೇ ಸರಿ—

ವೃತ್ತ || ಸೆಳೆಯುತ್ತಿರ್ಪನಂತರಂ ಮೌರ್ವಿಯ ಕಠಿನತೆವೆತ್ತಿರ್ಪ ಪೂರ್ವಾಂಗದಿಂ ಕಂ
ಗೊಳಿಸುತ್ತುಂ ಸೂರ್ಯನುಗ್ರಾತಪವ ಸಹಿಪ ಮೇಣ್ ಸ್ವೇದಲೇಶಂಗಳಿಂದಂ |
ಕಳೆಯೇನುಂ ಕುಂದದಿರ್ಪೀತನ ತನು ಬಡವಾಗಿರ್ದೊಡಂ ದಾರ್ಢ್ಯದಿಂದಂ
ಬಳಮಂ ತಾಳ್ದಿರ್ಕುಮುರ್ವೀಧರ ಕಟಕಚರದ್ವನ್ಯದಂತಾವಳಂಬೊಲ್ ||

(ಸಮೀಪಕ್ಕೆ ಬಂದು) ಸ್ವಾಮಿಗೆ ವಿಜಯವುಂಟಾಗಲಿ! ಈ ಅರಣ್ಯದಲ್ಲಿ ದುಷ್ಟ ಮೃಗಸಂಚಾರವು ನಿರೋಧಿಸಲ್ಪಟ್ಟಿರುವುದು. ಇನ್ನು ತಡವೇತಕ್ಕೆ?

ರಾಜಂ—ಎಲೈ ಸೇನಾಪತಿಯೆ, ಬೇಟೆಯನ್ನು ನಿಂದಿಸುವ ಮಾಢವ್ಯನ ದೆಸೆಯಿಂದ ನನಗೆ ಉತ್ಸಾಹಭಂಗವಾಯಿತು.

ಸೇನಾಪತಿ—(ಮರೆಯಲ್ಲಿ) ಎಲೈ ಮಿತ್ರನೆ, ನೀನು ಪ್ರತಿಕೂಲನಾಗಿಯೇ ಇರು; ನಾನಾದರೋ, ಪ್ರಭುವಿನ ಚಿತ್ತವೃತ್ತಿಯನ್ನು ಅನುಸರಿಸುವೆನು. (ಪ್ರಕಾಶವಾಗಿ) ಈ ಮೂಢನು ಮನಸ್ಸಿಗೆ ಬಂದಂತೆ ಹರಟಲಿ; ಬೇಟೆಯು ಪ್ರಯೋಜನಕಾರಿ ಎಂಬುದಕ್ಕೆ ಸ್ವಾಮಿಯೇ ದೃಷ್ಟಾಂತವಲ್ಲವೆ?

ಕಂದ || ಮೇದಶ್ಛೇದನದಿಂದೆ ಕೃ
ಶೋದರಮೆಂದೆನಿಸಿದೊಡಲಿದುತ್ಸಾಹಕ್ಕಿಂ |
ಬಾದಪುದು ಬೆದರ ಮಿಗಗ
ಳ್ಗಾದಂಜಿಕೆ ಮುಳಿಸಿವೆರಡುಮರಿಯಲ್ಬರ್ಕುಂ || ೩೯ ||

ಮತ್ತಂ

ಕಂದ || ಚಲವಾದ ಲಕ್ಷ್ಯದೊಳಗಂ
ಫಲಿಪುದು ಧನ್ವಿಗಳ ಬಾಣಮೀಬೇಟೆಯುಮಂ |
ನೆಲದೊಳ್ ವ್ಯಸನಮೆನುತ್ತಂ
ಪಳಿವುದು ಪುಸಿಯಿಂತು ಜನದಮೇತರಿನಕ್ಕುಂ || ೪೦ ||

ವಿದೂ—(ಕೋಪದಿಂದ) ಎಲೋ ಪ್ರೋತ್ಸಾಹಕನೆ! ತೆಗೆ! ನಮ್ಮ ಪ್ರಭು ಬೇಟೆಯಲ್ಲಿ ವಿಮುಖನಾದನು. ನೀನಾದರೋ ಅಡವಿಯಿಂದಡವಿಗೆ ಸುತ್ತುತ್ತಾ ಮನುಷ್ಯರ ಮೂಗಿನ ಮಾಂಸದಲ್ಲಿ ಆಶೆಯುಳ್ಳ ಯಾವುದಾದರೂ ಒಂದು ಮುದಿ ಕರಡಿಯ ಬಾಯಿಗೆ ಬೀಳುವೆ.

ರಾಜಂ—ಎಲೈ ಸೌಮ್ಯನಾದ ಸೇನಾಪತಿಯೆ, ಬಹಳ ಮಾತಿನಿಂದ ಪ್ರಯೋಜನವೇನು? ನಾವು ಆಶ್ರಮದ ಸಮೀಪದಲ್ಲಿರುವುದರಿಂದ ನೀನು ಹೇಳುವುದು ಅಭಿನಂದಿಸತಕ್ಕದಲ್ಲ. ಈಗಲಾದರೋ—

ವೃತ್ತ || ಮುಳುಗುಗೆ ಕೋಡುಗುಟ್ಟುತೆ ಜಲಾಶಯಮಧ್ಯದೆ ಕಾಡಕೋಣಗಳ್
ಉಪ || ನೆಳಲೊಳೆ ಮೆಲ್ಕಮಾಡುಗೆ ಮೃಗಾವಳಿ ಸೇರುತೆ ಸೂಕರಾಳಿ ಪ|
ಲ್ವಲದೊಳೆ ಮುಸ್ತೆಯಂ ಬಗಿದು ಕೀಳುಗೆ ನೆಮ್ಮದಿವೆತ್ತು ವಿಶ್ರಮಂ
ದಳೆಗೆ ಮದೀಯಚಾಪಮಿದುವುಂ ಶಿಥಿಲೀಕೃತರಜ್ಜುಬಂಧನಂ || ೪೧ ||

ಸೇನಾಪತಿ—ಪ್ರಭುವಿನ ಇಷ್ಟವಿದ್ದಂತಾಗಲಿ.

ರಾಜಂ—ಒಳ್ಳೆಯದು; ಮೊದಲು ಬಂದ ಬೇಟೆಗಾರರನ್ನು ಕಳುಹಿಸಿ ನನ್ನ ಸೈನಿಕರನ್ನೂ ತಪೋವನದ ಸಮೀಪಕ್ಕೆ ಬಾರದಂತೆ ನಿಲ್ಲಿಸು. ಕೇಳು—

ಕಂದ || ಶಾಂತಿಪ್ರಧಾನಮುನಿಗಳೊ
ಳಂತರ್ಗತಮಿರ್ಪುದುರಿಪ ತೇಜಂ ಪರತೇ|
ಜಂ ತಗುಳ್ದೊಡೆ ಸಲೆ ತೋರ್ಪರ
ದಂ ತಾಂ ಸ್ಪರ್ಶಾನುಕೂಲರವಿಕಾಂತಂಬೊಲ್ || ೪೨ ||

ಸೇನಾಪತಿ—ಪ್ರಭುವಿನಾಜ್ಞೆಯಂತಾಗಲಿ.

ವಿದೂ—ಎಲೆ ತೊತ್ತಿನಮಗನೆ, ನಿನ್ನ ಉತ್ಸಾಹಸಮಾಚಾರವು ಧ್ವಂಸವಾಯಿತು; ಇನ್ನು ನಡೆ.

(ಸೇನಾಪತಿ ಹೊರಟುಹೋಗುವನು)

ರಾಜಂ—(ಪರಿಜನವನ್ನು ನೋಡಿ) ನಿಮ್ಮ ಬೇಟೆಯ ವೇಷವನ್ನು ತೆಗೆದು ಬಿಡಿ; ಎಲೈ ರೈವತಕನೆ, ನೀನು ಕೂಡ ನಿನ್ನ ಕೆಲಸವನ್ನು ನೋಡು.

ಪರಿಜನರು—ಪ್ರಭುವಿನಾಜ್ಞೆಯಂತೆ. (ಎಂದು ಹೊರಟುಹೋಗುವರು)

ವಿದೂ—ಎಲೈ ಮಿತ್ರನೆ, ಈಗ ಇಲ್ಲಿ ಒಂದು ನೊಣವೂ ಇಲ್ಲದಂತೆ ಮಾಡಿದೆ. ಮರದ ನೆಳಲಿಂದ ಶೀತಲವಾದ ಈ ಶಿಲಾಪೀಠದಲ್ಲಿ ಕುಳಿತುಕೊ. ನಾನು ಕೂಡ ಕುಳಿತು ವಿಶ್ರಮಿಸಿಕೊಳ್ಳುವೆನು.

ರಾಜಂ—ಮುಂದೆ ನಡೆ.

ವಿದೂ—ದಯಮಾಡಬೇಕು.

(ಇಬ್ಬರೂ ಶಿಲಾಪೀಠದಲ್ಲಿ ಕುಳಿತುಕೊಳ್ಳುವರು)

ರಾಜಂ—ಎಲೈ ಮಾಢವ್ಯನೆ, ನಿನ್ನ ಕಣ್ಣು ಹುಟ್ಟಿದುದು ನಿಷ್ಫಲವಾಯಿತು; ಮುಖ್ಯವಾಗಿ ನೋಡತಕ್ಕ ವಸ್ತುವನ್ನು ನೀನು ನೋಡಲಿಲ್ಲ.

ವಿದೂ—ಅಂಥ ವಸ್ತು ನನ್ನ ಇದಿರಿಗೇ ಇರುವುದಲ್ಲವೆ!

ರಾಜಂ—ಎಲ್ಲರಿಗೂ ತಮ್ಮ ತಮ್ಮ ವಸ್ತು ತಮಗೆ ಚೆನ್ನಾಗಿ ಕಾಣುವುದು; ನಾನಾದರೋ, ಆಶ್ರಮಕ್ಕೆ ಅಲಂಕಾರಪ್ರಾಯಳಾದ ಆ ಶಕುಂತಳೆಯನ್ನೇ ಕುರಿತು ಕೇಳುವೆನು.

ವಿದೂ—(ತನ್ನಲ್ಲಿತಾನು) ಒಳ್ಳೆಯದು; ಇವನ ಮಾತಿಗೆ ಅವಕಾಶವನ್ನು ಕೊಡದೆ ಇರುವೆನು. (ಪ್ರಕಾಶವಾಗಿ) ತಪಸ್ವಿಕನ್ನೆಯೂ ಅಪೇಕ್ಷಿಸಲ್ಪಡತಕ್ಕವಳಾಗಿರುವಳೇ?

ರಾಜಂ—ಎಲೈ ಮಿತ್ರನೆ, ಗ್ರಾಹ್ಯವಲ್ಲದ ವಸ್ತುವಿನಲ್ಲಿ ಪುರುಕುಲದರಸರ ಮನಸ್ಸು ಪ್ರವರ್ತಿಸುವುದೆ?

*ಕಂದ || ಸುರಯುವತಿಭವೆಯಲಾ ಮುನಿ
ವರಕೌಶಿಕಪುತ್ರಿ ಮಾತ್ರ ತೊರೆದೈದಲ್ ಕ|
ಣ್ವರ ಬಳಿಸೇರ್ದಳ್ ಮಾಲತಿ
ಯರಲೆಕ್ಕದ ಗಿಡದ ಮೇಲೆ ಜಗಳ್ದುರುಳಿದವೋಲ್ || ೪೩ ||

ವಿದೂ—(ನಕ್ಕು) ಎಲೈ ಮಿತ್ರನೆ, ಪಿಂಡಖರ್ಜೂರದಲ್ಲಿ ಬೇಸರಪಟ್ಟು ಹುಣಿಸೆ ಹಣ್ಣನ್ನು ತಿನ್ನಲು ಬಯಸಿದವನಂತೆ ರಾಣೀವಾಸದ ಉತ್ತಮಾಂಗನೆಯರನ್ನು ತಿರಸ್ಕರಿಸಿ ನೀನು ಮುನಿಪುತ್ರಿಯನ್ನು ಬಯಸುವವನಾದೆ!

ರಾಜಂ—ಆಕೆಯನ್ನು ನೀನು ನೋಡಿದ್ದರೆ ಹೀಗೆ ಹೇಳುತ್ತಿರಲಿಲ್ಲ.

ವಿದೂ—ಆದರೆ ನಿನಗೂ ಆಶ್ಚರ್ಯವನ್ನುಂಟುಮಾಡುವ ವಸ್ತು ರಮಣೀಯವಾದುದೇ ಸರಿ.

---

*ರಾಗ—ಧನಾಸರಿ. ಆದಿತಾಳ.

**ಸಖನೆ ಕೇಳಾ ಶಶಿ | ಮುಖಿಯನೇಂ ವರ್ಣಿಪೇಂ ||ಪಲ್ಲ|| ನಿಖಿಲವಧೂಕುಲ | ಶಿಖಾಮಣಿ ಯನುನಾಂ ||ಅನು|| ಮೊದಲೊಳಾ ಮೇನಕೆ | ಯುದರದೊಳಾಕೆ | ಉದಿಸಿದ ಕನ್ಯಕೆ | ಮದನ ಪತಾಕೆ ||೧|| ಆ ಕೌಶಿಕ ಮುನಿ | ಯಾಕೆಗೆ ಜನಕನು | ಆ ಕಣ್ವನವಳನು | ಸಾಕಿದ ಪಿತನು ||೨|| ಅವಳನದೇಪರಿ | ವಿವರಿಪೆ ನಿರ್ಜರೀ | ಭವೆಯಲಾ ಸುಂದರಿ | ನವರಸಲಹರಿ ||೩|| ವರನನದಾವನ ದೊರೆಯಿಪನೋ ವಿಧಿ | ಅರಿಯೆನಾನಾಕೆಗೆ | ಸರಿಯಣಿ ಜಗದಿ ||೪||**

ಶ್ಲೋ ರಾಜಂ—ಎಲೈ ಮಿತ್ರನೆ, ಬಹಳ ಮಾತುಗಳಿಂದೇನು ?

*ವೃತ್ತ || ಪ್ರಾಣಂಬೊಯ್ದನೊ ಚಿತ್ರಿಸುತ್ತುಮವಳಂ ಸೌಂದರ್ಯಸಾರಂಗಳಿಂ
ವಾಣೀವಲ್ಲಭನೋವೊ ನಿರ್ಮಿಸಿದನೋ ಮೇಣ್ ಚಿತ್ತದಿಂ ಗೆಯ್ದನೊ |
ಜಾಣಂ ಬ್ರಹ್ಮನ ಮತ್ತಮಾಕೆಯೊಡಲಂ ನೋಡಲ್ಕದೇನೆಂದಪೆಂ
ಕ್ಷೋಣೀಭಾಗದೆ ಬೇರೆ ತೋರ್ಕುಮೆನಗಾಸ್ತ್ರೀರತ್ನಸೃಷ್ಟಿಕ್ರಮಂ ||೪೪||

ವಿದೂ—ಹೀಗಿದ್ದುದೇ ಆದರೆ ಆಕೆ ರೂಪವತಿಯರನ್ನೆಲ್ಲಾ ತಿರಸ್ಕರಿಸತಕ್ಕವಳೆ !

ರಾಜಂ—ಇದು ಬೇರೆ ನನ್ನ ಮನಸ್ಸಿನಲ್ಲುಂಟು.

ವೃತ್ತ || ಎಣಿಸೆ ನಖಂಗಳಿಂದುಡಿಯದಿರ್ದ ಚಿಗುರ್ ಕಡೆದೆಜ್ಜವಿಕ್ಕದೊ
ಶ್ಲೋ ಳ್ಮಣಿ ಸವಿನೋಡದಿರ್ದಭಿನವಂ ಮಧು ವಾಸಿಸದಿರ್ದ ಪೂವು ಧಾ |
ರಿಣಿಯೊಳಖಂಡಪುಣ್ಯಫಲಮಾಕೆಯ ರೂಪನಘಂ ಗಡಾ ಅದ
ಕ್ಕೆಣೆಯೆನೆ ಭೋಕ್ತೃವಂ ವಿಧಿಯದಾವನನೊಂದಿಪನಾಹ ಕಾಣೆನಾಂ ||

ವಿದೂ—ಹಾಗಾದರೆ ಆಕೆಯನ್ನು ಜಾಗ್ರತೆಯಾಗಿ ಕಾಪಾಡಿಕೊ. ಇಂಗುದೀ ತೈಲದಿಂದ ಜಿಡ್ಡಾದ ತಲೆಯುಳ್ಳ ಯಾವನಾದರೂ ಒಬ್ಬ ದರಿದ್ರನಾದ ಕಾಡಮನುಷ್ಯನ ಕೈಗೆ ಬಿದ್ದಾಳು.

ರಾಜಂ—ಆಕೆಯಾದರೋ ಪರಾಧೀನೆ; ಅಲ್ಲಿ ಗುರುಜನಗಳೂ ಸಮೀಪದಲ್ಲಿರಲಿಲ್ಲ.

ವಿದೂ—ಹಾಗಾದರೆ ನಿನ್ನ ವಿಷಯದಲ್ಲಿ ಆಕೆಯ ಕಟಾಕ್ಷಾನುರಾಗ ಹೇಗಿತ್ತು ?

ರಾಜಂ—ಸ್ವಾಭಾವಿಕವಾಗಿ ತಪಸ್ವಿಕನ್ಯೆಯರು ಚದುರೆಯರಲ್ಲ ; ಆದರೂ

ಕಂದ || ಬರೆ ನಾನಿದಿರೊಳ್ ನೋಟವ
ತಿರುಪುತ್ತಂ ನಗೆಯ ಪರನಿಮಿತ್ತಂಗೈದಾ |
ತರುಣಿಯ ನಾಣಿಂ ಮದನಂ
ನೆರೆಮರೆಯೆನಿಸಿಲ್ಲಮಂತೆ ಮೆರೆದನುಮಲ್ಲಂ || ೪೬ ||

ವಿದೂ—ನಿನ್ನನ್ನು ನೋಡಿದ ಮಾತ್ರದಲ್ಲೇ ಆಕೆ ನಿನ್ನ ತೊಡೆಯನ್ನೇರುವಳೆ ?

ರಾಜಂ—ಸಖಿಯರೊಡನೆ ಹೊರಟ ಕಾಲದಲ್ಲಿ ಬಹುಲಜ್ಜೆಯುಳ್ಳವಳಾದಾಗ್ಯೂ ಆಕೆ ನನ್ನ ವಿಷಯದಲ್ಲಿ ತನ್ನ ಅನುರಾಗವನ್ನು ಚೆನ್ನಾಗಿ ಪ್ರಕಟಮಾಡಿದಳು ; ಹೇಗೆಂದರೆ—

* ೨೪ನೆಯ ಪುಟದ ಕೆಳಗಡೆ ಇರುವ ಹಾಡನ್ನು ನೋಡಿ.

ಕಂದ || ನಡೆಯುತ್ತೊಡನೆ ಕುಶಾಂಕುರ
ಮ[illegible]್ ತಾಗಿದುದೆನುತ್ತೆ ನಿಂದಳ್ ಮೇಣ್ ಪೂ |
ಗಿಡದೊಳ್ ಸಿಲ್ಕಿದೊಡಂ ನಾ
ರುಡೆಯಂ ಬಿಡಿಸುತ್ತೆ ತಿರುಗಿ ನೋಡಿದಳೆನ್ನಂ || ೪೭ ||

ವಿದೂ—ಹಾಗಾದರಿನ್ನೇನು? ಬುತ್ತಿಯನ್ನು ಕಟ್ಟು; ಈಗ ನಿನಗೆ ತಪೋವನವೂ ಉಪವನವಾಯಿತೆಂದೂಹಿಸುವೆನು.

ರಾಜಂ—ಎಲೈ ಮಿತ್ರನೆ, ನಾನಿಲ್ಲಿರುವುದನ್ನು ಕೆಲವರು ತಪಸ್ವಿಗಳು ಬಲ್ಲರು; ಯೋಚಿಸು; ಯಾವ ನೆವದಿಂದ ಪುನಃ ಆಶ್ರಮಕ್ಕೆ ಹೋಗೋಣ?

ವಿದೂ—ನಿನಗೆ ಬೇರೆ ನೆವವೇತಕ್ಕೆ? ನೀನು ಅರಸಲ್ಲವೆ?

ರಾಜಂ—ಆದರೇನು?

ವಿದೂ—ತೃಣಧಾನ್ಯದ ಆರನೆಯ ಭಾಗವನ್ನು ನಮಗೆ ಕೊಡಬೇಕೆಂದು ಹೋಗುವುದು.

ರಾಜಂ—ಎಲೈ ಮೂರ್ಖನೆ, ಕೇಳು; ಈ ತಪಸ್ವಿಗಳು ಮತ್ತೊಂದು ವಿಧವಾದ ಭಾಗವನ್ನು ನಮಗೆ ಕೊಡುವರು; ರತ್ನರಾಶಿಯನ್ನಾದರೂ ಬಿಟ್ಟು ಅದನ್ನು ಅಭಿನಂದಿಸತಕ್ಕುದಾಗಿದೆ. ನೋಡು—

ಕಂದ || ಜನಪರ್ಗೆ ನಿಖಿಲವರ್ಣದ
ಜನಗಳ್ ಕುಡುತಿರ್ಪ ಷಷ್ಠಭಾಗಮದಳಿಗುಂ |
ಮುನಿಗಳ್ ಕುಂದದ ತಪದಾ
ರನೆಯಂಶವನೆಮಗೆ ಸಖನೆ ಕೊಟ್ಟಪರಲ್ತೇ || ೪೮ ||

ತೆರೆಯಲ್ಲಿ—ಆಹಾ! ನಮ್ಮ ಕಾರ್ಯವು ಸಿದ್ಧಿಸಿತು.

ರಾಜಂ—(ಕಿವಿಗೊಟ್ಟು) ಓಹೋ! ಗಂಭೀರವಾಗಿಯೂ ಸೌಮ್ಯವಾಗಿಯೂ ಇರುವ ಈ ಧ್ವನಿಯು ಮುನಿಗಳದಾಗಿರುವುದು.

(ದ್ವಾರಪಾಲಕ ಬಂದು)

ದ್ವಾರಪಾಲಕ—ಸ್ವಾಮಿಗೆ ವಿಜಯವಾಗಲಿ! ಇದೋ, ಇಬ್ಬರು ಋಷಿಕುಮಾರಕರು ಬಾಗಿಲಬಳಿಗೆ ಬಂದಿರುವರು.

ರಾಜಂ—ಹಾಗಾದರೆ ಜಾಗ್ರತೆಯಾಗಿ ಅವರನ್ನು ಕರೆದುಕೊಂಡು ಬಾ.

ದ್ವಾರಪಾ—ಸ್ವಾಮಿ, ಕರೆತರುವೆನು. (ಎಂದು ಹೋಗಿ ಋಷಿಕುಮಾರಕರೊಡನೆ ಬಂದು) ಪೂಜ್ಯರು ಹೀಗೆ ದಯಮಾಡಬೇಕು.

(ಅವರಿಬ್ಬರೂ ಅರಸನನ್ನು ನೋಡಿ)

ಮೊದಲನೆಯವನು—ಆಹಾ! ಈತನ ಶರೀರವು ತ[illegible]ಮಯವಾದಾಗ್ಯೂ ವಿಶ್ವಾಸವನ್ನುಂಟುಮಾಡುತಕ್ಕುದಾಗಿರುವುದು. ಋಷಿಕಲ್ಪನಾದ ಈ ರಾಜನಲ್ಲಿ ಇದು ಯುಕ್ತವೇ. ಏತಕ್ಕೆಂದರೆ—

ಚಂ
ವೃತ್ತ || ಪರಿಕಿಸೆ ಸರ್ವಭೋಗ್ಯಮೆನಿಪಾಶ್ರಮದೊಳ್ ನೆಲಸಿರ್ದನುರ್ವಿಯಂ
ಪೊರೆವ ನಿಮಿತ್ತದಿಂದೆ ತಪಮಂ ತವೆ ಪೆರ್ಚಿಪನೆಂದುಮೀತನುಂ |
ಕರಣಜಯಿತ್ವಮಂ ಧರಿಸಿದಂತರಿನೀತನನಂತರಿಕ್ಷದೊಳ್
ಕರಗಳನೆತ್ತಿ ರಾಯರಿಸಿಯೆಂದುರೆ ಕೀರ್ತಿಪರೆತ್ತೆ ಚಾರಣರ್ || ೪೯ ||

ಎರಡನೆಯವನು—ಎಲೈ ಗೌತಮನೆ, ಈತನು ಇಂದ್ರಸಖನಾದ ಆ ದುಷ್ಯಂತ ಮಹಾರಾಜನು.

ಮೊದಲನೆಯವನು—ಹೌದು.

ಎರಡನೆಯವನು—ಆದುದರಿಂದಲೇ

ಚು
ವೃತ್ತ || ಪುರಪರಿಘಾಯತಾತ್ಮಭುಜನಾದಿವನೊರ್ವನೆ ಸಾಗರಂಗಳಿಂ
ಕರಿದೆನಿಸಿರ್ದ ನೀಮೆದಳೆದೀನೆಲನೆಲ್ಲಮನಾಳ್ವನೆಂಬುದ |
ಚ್ಚರಿಯೆ ಸಮೌರ್ವಿಯಾದಿವನ ಬಿಲ್ಲೊಳಮಿಂದ್ರನ ವಜ್ರದಲ್ಲಿಯುಂ
ಸುರರಮಣೀಜನಂಗಳಭಿಕಾಂಕ್ಷಿಸುವರ್ ಜಯಮಂ ರಣಂಗಳೊಳ್ ||೫೦||

ಇಬ್ಬರೂ—(ರಾಜನ ಸಮೀಪಕ್ಕೆ ಬಂದು) ಎಲೈ ರಾಯನೆ, ಜಯಶೀಲನಾಗು!

ರಾಜಂ—(ಪೀಠದಿಂದೆದ್ದು) ಪೂಜ್ಯರಾದ ನಿಮಗೆ ನಮಸ್ಕರಿಸುವೆನು.

ಇಬ್ಬರೂ—ಎಲೈ ಮಹಾರಾಜನೆ, ನಿನಗೆ ಮಂಗಳವಾಗಲಿ! (ಎಂದು ಫಲಗಳನ್ನು ಕೊಡುವರು)

ರಾಜಂ—(ನಮಸ್ಕಾರಪೂರ್ವಕವಾಗಿ ಫಲಗಳನ್ನು ತೆಗೆದುಕೊಂಡು) ಪೂಜ್ಯರೆ, ತಪಸ್ಮಾಜ್ಞೆಯೇನು? ಕರುಣಿಸಬೇಕು.

ಇಬ್ಬರೂ—ಎಲೈ ಮಹಾರಾಜನೆ, ನೀನಿಲ್ಲಿರುವುದನ್ನು ತಿಳಿದುದರಿಂದ ಆಶ್ರಮವಾಸಿಗಳು ಹೀಗೆ ನಿನ್ನನ್ನು ಪ್ರಾರ್ಥಿಸುವರು:

ರಾಜಂ—ಏನೆಂದಾಜ್ಞಾಪಿಸುವರು?

ಇಬ್ಬರೂ—ಪೂಜ್ಯರಾದ ಕಣ್ವರು ಆಶ್ರಮದಲ್ಲಿಲ್ಲದ ಕಾರಣ ರಾಕ್ಷಸರು ನಮ್ಮ ಯಾಗಕ್ಕೆ ವಿಘ್ನವನ್ನಾಚರಿಸುವರು; ಆದುದರಿಂದ ಕೆಲವು ರಾತ್ರಿಗಳಲ್ಲಿ ಸಾರಥಿ

ಯೊಡನೆ ನೀನು ಆಯುಧಪಾಣಿಯಾಗಿ ಆಶ್ರಮವನ್ನು ಸನಾಥವನ್ನಾಗಿ ಮಾಡಬೇಕೆಂದು.

ರಾಜಂ—ಅನುಗ್ರಹಿಸಲ್ಪಟ್ಟೆನು.

ವಿದೂ—(ಮರೆಯಲ್ಲಿ) ಈ ಪ್ರಾರ್ಥನೆ ಈಗ ನಿನಗೆ ಅನುಕೂಲವಾಯಿತು.

ರಾಜಂ—ಎಲೈ ರೈವತಕನೆ, ಧನುರ್ಬಾಣಗಳೊಡನೆ ರಥವನ್ನು ತರುವಂತೆ ನಾನು ಹೇಳಿದೆನೆಂದು ಸಾರಥಿಗೆ ಹೇಳು.

ದೌವಾರಿಕ—ಮಹಾರಾಜನ ಅಪ್ಪಣೆಯಾದಂತೆ. (ಎಂದು ಹೋಗುವನು)

ಋಷಿಕುಮಾರರಿಬ್ಬರೂ—(ಸಂತೋಷಯುಕ್ತರಾಗಿ)

ಕಂದ || ಚಿತ್ರಮಿದೇಂ ಪೂರ್ವಿಕರ ಚ
ರಿತ್ರಂಗಳನನುಕರಿಸಿದ ನಿನಗಿದು ಸಹಜಂ |
ಧಾತ್ರಿಯೊಳಾಪನ್ನಾಭಯ |
ಸತ್ರದೆ ಧೃತದೀಕ್ಷರಲ್ತೆ ಪುರುಕುಲದರಸರ್ || ೫೧ ||

ರಾಜಂ—ತಾವು ಮೊದಲು ದಯಮಾಡಬೇಕು; ನಾನೂ ಸಂಗಡಲೇ ಬಂದೆನೆಂದು ಭಾವಿಸಿರಿ.

ಇಬ್ಬರೂ—ಎಲೈ ರಾಯನೆ, ಜಯಶೀಲನಾಗು! (ಎಂದು ಹರಸಿ ಹೋಗುವರು)

ರಾಜಂ—ಎಲೈ ಮಾಢವ್ಯನೆ, ನಿನಗೆ ಶಕುಂತಳೆಯನ್ನು ನೋಡಬೇಕೆಂಬ ಕುತೂಹಲವುಂಟೊ?

ವಿದೂ—ಮೊದಲು ನನ್ನಲ್ಲಿ ಆ ಕುತೂಹಲ ತುಂಬತುಳುಕುತ್ತಿತ್ತು. ಈಗ ರಾಕ್ಷಸರ ಸಮಾಚಾರದಿಂದ ಬಿಂದುಮಾತ್ರವೂ ಉಳಿಯದಂತಾಯಿತು.

ರಾಜಂ—ಅಂಜಬೇಡ, ನೀನು ನನ್ನ ಸಮೀಪದಲ್ಲಿರುವೆಯಲ್ಲವೇ?

ವಿದೂ—ನಾನು ರಾಕ್ಷಸರ ದೆಸೆಯಿಂದ ಬದುಕಿಸಲ್ಪಟ್ಟೆನು.

(ದೌವಾರಿಕನು ಬಂದು)

ದೌವಾರಿಕ—ಸನ್ನದ್ಧವಾದ ರಥವು ಸ್ವಾಮಿಯ ಜಯಪ್ರಯಾಣವನ್ನು ಅಪೇಕ್ಷಿಸುವುದು; ಇದಲ್ಲದೆ ದೇವಿಯರಪ್ಪಣೆಯನ್ನು ತೆಗೆದುಕೊಂಡು ಪಟ್ಟಣದಿಂದ ಕರಭಕನು ಈಗತಾನೇ ಬಂದಿರುವನು.

ರಾಜಂ—(ವಿಶ್ವಾಸಯುಕ್ತನಾಗಿ) ಮಾತೃಶ್ರೀಯವರು ಕಳುಹಿಸಿರುವರೆ?

ದೌವಾ—ಅಹುದು.

ರಾಜಂ—ಹಾಗಾದರೆ ಬೇಗ ಕರೆದುಕೊಂಡು ಬಾ.

ದೌವಾ—ಅಪ್ಪಣೆ (ಎಂದು ಹೋಗಿ ಕರಭಕನೊಡನೆ ಬಂದು) ಇದೋ ಸ್ವಾಮಿಯು; ಸಮೀಪಕ್ಕೆ ಹೋಗು.

ಕರಭಕ—(ಸಮೀಪಕ್ಕೆ ಬಂದು) ಸ್ವಾಮಿಗೆ ವಿಜಯವಾಗಲಿ! ಬರುವ ನಾಲ್ಕನೆಯ ದಿವಸದಲ್ಲಿ ಪುತ್ರಪಿಂಡಪಾಲನವೆಂಬ ಉಪವಾಸವ್ರತವು ನಡೆಯುವುದು; ಆ ವ್ರತಕ್ಕೆ ದೀರ್ಘಾಯುವಾದ ನೀವು ಬಳಿಸೇರಿ ತಮ್ಮನ್ನು ಆದರಿಸಬೇಕೆಂದು ದೇವಿಯರು ಆಜ್ಞಾಪಿಸುವರು.

ರಾಜಂ—ಈ ಕಡೆ ತಪಸ್ವಿಗಳ ಕಾರ್ಯ, ಆ ಕಡೆ ಗುರುಜನಾಜ್ಞೆ; ಎರಡೂ ಮೀರತಕ್ಕುದಲ್ಲ; ಈ ವಿಷಯದಲ್ಲಿ ಏನು ಮಾಡಬೇಕು?

ವಿದೂ—ತ್ರಿಶಂಕುವಿನಂತೆ ಅಂತರಾಳದಲ್ಲಿ ನಿಲ್ಲಬೇಕು!

ರಾಜಂ—ನಿಜವಾಗಿ ವ್ಯಾಕುಲನಾಗಿರುವೆನು:

ಕಂದ || ಹೃದಯವಿದಿರ್ತೆರನಾಯ್ತೆನ
ಗೊದವಿದ ಕಾರ್ಯಗಳ ಭಿನ್ನದೇಶತೆಯಿಂದಂ |
ಇದಿರೊಳ್ ಸಂಗಡಿಸಿದ ಶೈ
ಲದೆ ತಾಗಿದ ಪೊಳೆಯ ಪೊನಲ ಮಾಳ್ಕೆಯಿನೀಗಳ್ || ೫೨ ||

(ಆಲೋಚಿಸಿ) ಎಲೈ ಮಿತ್ರನೆ, ಮಾತೃಶ್ರೀಯವರಿಗೆ ನಿನ್ನಲ್ಲಿ ಪುತ್ರವಾತ್ಸಲ್ಯವಿರುವುದು; ಆದುದರಿಂದ ಪೂಜ್ಯನಾದ ನೀನು ಇಲ್ಲಿಂದ ಹಿಂದಿರುಗಿ ತಪಸ್ವಿಕಾರ್ಯದಲ್ಲಿ ನನಗಿರುವ ತತ್ಪರತೆಯನ್ನು ತಿಳಿಸಿ ಅವರ ಪುತ್ರಕೃತ್ಯವನ್ನು ನೆರವೇರಿಸತಕ್ಕವನಾಗು.

ವಿದೂ—ನನ್ನನ್ನು ರಾಕ್ಷಸರಿಗೆ ಭಯಪಡತಕ್ಕವನೆಂದು ಭಾವಿಸುವುದಿಲ್ಲವಷ್ಟೆ?

ರಾಜಂ—ಎಲೈ ಮಹಾಬ್ರಾಹ್ಮಣನೆ, ನಿನ್ನಲ್ಲಿದು ಹೇಗೆ ಭಾವಿಸುವುದಕ್ಕಾದೀತು?

ವಿದೂ—ಹಾಗಾದರೆ, ರಾಜಸಹೋದರನು ಹೇಗೆ ಹೋಗತಕ್ಕದ್ದೋ ಹಾಗೆ ಹೋಗುವೆನು.

ರಾಜಂ—ಆಗಲಿ; ತಪೋವನಕ್ಕೆ ಬಾಧೆಯುಂಟಾಗಬಾರದೆಂದು ನನ್ನ ಅನುಚರರನ್ನೆಲ್ಲಾ ನಿನ್ನೊಡನೆ ಕಳುಹಿಸುವೆನು.

ವಿದೂ—ಹಾಗಾದರೆ ಈಗ ನಾನು ಯುವರಾಜನಾದೆನು.

ರಾಜಂ—(ತನ್ನಲ್ಲಿ ತಾನು) ಈ ವಟು ಚಪಲನು; ನನ್ನ ಅಭಿಲಾಷೆಯನ್ನು ರಾಣೀವಾಸದ ಜನಕ್ಕೆ ಬಂದುವೇಳೆ ಹೇಳಾನು! ಒಳ್ಳೆಯದು, ಇವನಿಗೆ ಹೀಗೆ ಹೇಳುವೆನು:—(ವಿದೂಷಕನ ಕೈಯನ್ನು ಹಿಡಿದುಕೊಂಡು ಪ್ರಕಾಶವಾಗಿ) ಎಲೈ ಮಿತ್ರನೆ, ಋಷಿಗಳ ಗೌರವದಿಂದ ಆಶ್ರಮಕ್ಕೆ ಹೋಗುವೆನು; ತಪಸ್ವಿಕನ್ಯೆಯಾದ ಶಕುಂತಳೆಯಲ್ಲಿ ನಿಜವಾಗಿ ನನಗೆ ಅನುರಾಗವಿಲ್ಲ.

ಕಂದ || ಹರಿಣಂಗಳೊಡನೆ ಕಾಮಸ
ಪರಿಯರಿಯದೆ ಬಳೆದಳೆಲ್ಲಿ ನಾವೆಲ್ಲಿ ಕರಂ |
ಪರಿಹಾಸಕುಸಿರ್ದುದಂ ಸೀಂ
ಪರಮಾರ್ಥಮಿದೆಂದು ಒಗೆಯಬೇಡೈ ಮಿತ್ರಾ || ೫೩ ||

ವಿದೂ—ಅಹುದು, ಅಹುದು.

(ಎಲ್ಲರೂ ಹೊರಟುಹೋಗುವರು)

# ತೃತೀಯಾಂಕಂ

(ಅನಂತರ ಯಜಮಾನಶಿಷ್ಯನು ಕೈಯಲ್ಲಿ ದರ್ಭೆಯನ್ನು ಹಿಡಿದುಕೊಂಡು ಬರುವನು)

ಶಿಷ್ಯ—ಆಹ! ಮಹಾನುಭಾವನಲ್ಲವೆ · ದುಷ್ಯಂತಮಹಾರಾಜನು! ಆತನು ನಮ್ಮಾಶ್ರಮವನ್ನು ಪ್ರವೇಶಮಾಡಿದ ಮಾತ್ರಕ್ಕೇ, ನಮ್ಮ ಕರ್ಮಗಳೆಲ್ಲಾ ನಿರ್ವಿಘ್ನಗಳಾದುವು:

ಕಂದ || ಆ ನರನಾಥನ ಶರಸಂ
ಧಾನದೊಳೇಂ ಕಥೆಯೊ ಚಾಪಹುಂಕಾರನಿಭ|
ಜ್ಯಾನಾದಮಾತ್ರದಿಂದವ
ನೇನೆಂಬೆಂ ವಿಘ್ನವೆಲ್ಲವಂ ಪರಿಹರಿಕುಂ || ೫೪ ||

ವೇದೀಸಂಸ್ತರಣಾರ್ಥವಾಗಿ ಈ ದರ್ಭೆಗಳನ್ನು ಋತ್ವಿಜರಿಗೋಸ್ಕರ ತೆಗೆದುಕೊಂಡು ಹೋಗಿ ಕೊಡುವೆನು. (ಸ್ವಲ್ಪ ನಡೆದು, ಆಕಾಶವನ್ನು ನೋಡಿ) ಪ್ರಿಯಂವದೆ, ಈ ಲಾಮಂಚದ ಅನುಲೇಪನವನ್ನೂ ದಂಟುಗಳೊಡನೆ ಕೂಡಿದ ತಾವರೆಯೆಲೆಗಳನ್ನೂ ಯಾರಿಗೋಸ್ಕರ ತೆಗೆದುಕೊಂಡು ಹೋಗುವೆ? (ಕಿವಿಗೊಟ್ಟು) ಏನುಹೇಳುವೆ? ಶಕುಂತಳೆ ಬಿಸಿಲಿನ ಬೇಗೆಯಿಂದ ಬಹಳವಾಗಿ ಬಳಲಿರುವಳು; ಆಕೆಯ ಶರೀರಸಂತಾಪವನ್ನು ಪರಿಹರಿಸುವುದಕ್ಕೆಂದೊ? ಹಾಗಾದರೆ ಎಚ್ಚರದಿಂದ ಉಪಚರಿಸು; ಆಕೆಯಾದರೋ ಪೂಜ್ಯರಾದ ಕುಲಪತಿಗಳಿಗೆ ಪ್ರಾಣಪ್ರಾಯಳು; ನಾನು ಕೂಡ ಶಕುಂತಳೆಗೋಸ್ಕರ ಯಾಗಸಂಬಂಧಿಯಾದ ಶಾಂತ್ಯುದಕವನ್ನು ಗೌತಮಿಯು ಕರದಲ್ಲಿ ಕಳುಹಿಸಿಕೊಡುವೆನು. (ಹೊರಟುಹೋಗುವನು)

ಇದು ಶುದ್ಧ ವಿಷ್ಕಂಭ

—— ——

(ಅನಂತರ ವಿರಹಾವಸ್ಥೆಯುಳ್ಳ ರಾಜನು ಬರುವನು)

ರಾಜಂ—ಕಂದ || ತಿಳಿವೆಂ ಮುನಿಶಕ್ತಿಯನಾ
ಯೆಳೆಯಳ್ ಪರವಶೆಯೆನಿಪ್ಪುದುಮನಾದೊಡಮಾಂ|
ಸೆಳೆಯಲ್ಕಾರೆಂ ವಲಮಾ
ನಳಿನಾಂಬಕಿಯತ್ತಣಿಂದಮೆನ್ನೀ ಮನಮಂ || ೫೫ ||

(ಮದನಬಾಧೆಯನ್ನು ಅಭಿನಯಿಸಿ) ಎಲೈ ಪೂಜ್ಯನಾದ ಪುಷ್ಪಾಯುಧನೇ, ನಿನ್ನನ್ನೂ ಚಂದ್ರನನ್ನೂ ವಿಶ್ವಾಸಕ್ಕೆ ಯೋಗ್ಯರೆಂದು ಭಾವಿಸುವ ಕಾಮಿಜನರನ್ನು ನೀವು ಚೆನ್ನಾಗಿ ವಂಚಿಸುವಿರಿ! ಏತಕ್ಕೆಂದರೆ—

*ವೃತ್ತ || ನಿನ್ನಯ ಪುಷ್ಪಬಾಣತೆಯುಮಿಂದುವ ಶೀತಕರತ್ವಮುಂ ದಲೆ
ನ್ನನ್ನರೊಳಾರಯಲ್ಕನೃತಮೆಂದೆನೆ ತೋರ್ಪುದದೇತಕೆಂದೊಡೀ |
ಜೊನ್ನೊಡಲಿಂ ನಿಮಿರ್ಚಿದಪನಗ್ನಿಯ ತಣ್ಗದಿರಿಂದಮೋಹೊ ನೀ
ನುನ್ನನೆಗೋಲ್ಗಳಿಂ ಸಿಡಿಲ್ಗೆ ಸಾಟಿಯನಾಗಿಪೆ ಪಂಚಸಾಯಕಾ || ೫೬ ||

(ವ್ಯಸನದೊಡನೆ ಕೂಡಿ, ಸ್ವಲ್ಪ ನಡೆದು) ಯಾಗಕರ್ಮ ಮುಗಿಯಲು, ಋತ್ವಿಜರಿಂದ ಅಪ್ಪಣೆಯನ್ನು ಹೊಂದಿದ ನಾನು ಕಾಂತೆಯ ವಿರಹದಿಂದ ಕಳವಳಪಡುವ ಮನಸ್ಸನ್ನು ಎಲ್ಲಿ ವಿನೋದಪಡಿಸಲಿ! (ಎಂದು ನಿಟ್ಟುಸಿರನ್ನು ಬಿಟ್ಟು) ಪ್ರಿಯೆಯಾದ ಶಕುಂತಳೆಯನ್ನು ಕಾಣದೆ ನಾನು ಬದುಕುವ ಬಗೆ ಹೇಗೆ! ಒಳ್ಳೆಯದು, ಆಕೆಯನ್ನು ಹುಡುಕುವೆನು. (ಸೂರ್ಯನನ್ನು ನೋಡಿ) ಈ ಮಧ್ಯಾಹ್ನ ಸಮಯವನ್ನು ಶಕುಂತಳೆ ಲತಾಗೃಹಗಳಿಂದ ಮನೋಹರವಾದ ಮಾಲಿನೀತೀರದಲ್ಲಿ ಸಖಿಯರೊಡನೆ ಸೇರಿ ಕಳೆಯುತ್ತಿರಬಹುದು ; ಅಲ್ಲಿಗೆ ಹೋಗುವೆನು. (ಎಂದು ಸ್ವಲ್ಪ ನಡೆದು ನೋಡಿ) ಶೋಭನಾಂಗಿಯಾದ ಆ ಶಕುಂತಳೆ ಎಳದಾದ ಈ ಸಾಲುಮರಗಳ ಮಾರ್ಗವಾಗಿ ಈಗತಾನೆ ಹೋಗಿರುವಳೆಂದು ಊಹಿಸುವೆನು. ಏತಕ್ಕೆಂದರೆ—

---

*ಕಂದ || ಕುಸುಮಶರನೆಂದು ನಿನಗಾರ್
ಪೆಸರಿಟ್ಟರೊ ಕಾಣೆನಕಟ ಸುಮಬಾಣಮುಮಂ |
ಪೊಸತೆನೆ ಸಿಡಿಲ್ಗೆ ಸಾಟಿಯ
ನೆಸಗುತೆ ಸುಡುತಿರ್ಪೆಯೆಂತು ಸಹಿಪೆಂ ಕಂತೂ || •

ಕಂದ || ಜಗಕೆಲ್ಲ ತಂಪನೆಸಗುವ
ಮೃಗಲಾಂಛನನಕಟ ತನ್ನ ಹಿಮರಶ್ಮಿಗಳಿಂ |
ಮಿಗೆ ಕಿಡಿಯನುಗುಳುತಂ ಪ್ರಿಯೆ
ಯಗಲಿಕೆಯಾಂತೆನ್ನ ಸುಡುವನೇಗೈದಪೆನಾಂ ||

**ರಾಗ—ತೋಡಿ.** **ಆದಿತಾಳ.**

**ನಿಂದಿಪುದೇಕೆ ಕಂದರ್ಪ ನಿನ್ನನಾಂ || ಪ || ಹರಕೋಪಶಿಖಿ ನಿನ್ನೊ | ಳುರಿವುದೀಗಳು ಮಲ್ಲ | ದಿರೆ ಭೂತಿಶೇಷನಾ | ದರು ತೀಕ್ಷ್ಣನಹೆ ಯೆಂತು || ೧ || ಆ ಶಶಿಮುಖಿಯನು | ದ್ವೇಶಿಸಿ ಹೊಡೆವೆಯೆಂ | ಬಾಶಯದಿಂದಲಾ | ಕ್ರೋಶವಿಲ್ಲೆನಗಿನ್ನು || ೨ || ಬರಿದೆನ್ನ ಹಂಬಲಿಂ | ನೆರೆಬಳೆಧೆನ್ನೊಳೆ | ಶರಗಳ ಬಿಡುವುದು | ಸ್ಮರ ನಿನಗುಚಿತವೆ || ೩ ||**

ಕಂದ || ಪೂಗೊಯ್ದು ಸರಸಿಜಾನನೆ
ಪೋಗಲ್ ನೆರೆ ಮುಗಿದುದಿಲ್ಲ ಬಂಧನಕೋಶಂ |
ಕೈಗಳಿನುಡಿದೀ ತಳಿರ್ಗಳ
ಪೂಗಂ ಪಾಲಿಡಿದು ನಾಡೆ ಕಾಣಿಪುದಿನ್ನುಂ || ೫೭ ||

(ಸ್ವಲ್ಪ ನಡೆದು ಸ್ಪರ್ಶಸುಖವನ್ನು ಅಭಿನಯಿಸಿ)

ಆಹ! ತಂಪಾದ ಗಾಳಿಯಿಂದ ಈ ಪ್ರದೇಶವು ಮನೋಹರವಾಗಿರುವುದು.

ಕಂದ || ಮಾಲಿನಿಯ ತೆರೆಯ ತುಂತುರ
ತಾಳುತ್ತಂ ಬರ್ಪ ಪದ್ಮ ಸುರಭಿಸಮೀರಂ |
ಆಲಿಂಗಿಸೆ ಯೋಗ್ಯಂ ಸ್ಮರ
ಕಾಲಾನಲತಪ್ತಮೆನಿಸಿದೆನ್ನಂಗಗಳಿಂ || ೫೮ ||

(ಸ್ವಲ್ಪ ನಡೆದು ನೋಡಿ) ನಿಜವಾಗಿ ಈ ನೀರುಹಬ್ಬೆ ಬಳ್ಳಿಯನ್ನು ಹೊದಿಸಿರುವ ಲತಾಮಂಟಪದಲ್ಲಿ ಶಕುಂತಳೆ ಇರಬಹುದು ; ಹಾಗೆಯೇ ಸರಿ—

ಕಂದ || ಮುಂಗಡೆಯುಬ್ಬಾಗಿ ನಿತಂ
ಬಂಗಳ ಗೌರವದೆ ಪಿಂತೆ ತಗ್ಗಾಗಿ ಕರಂ |
ಕಂಗೊಳಿಪುದು ಪೊಸಪಜ್ಜೆ ಕು
ರಂಗಾಕ್ಷಿಯ ಬಿಳಿಯ ಮಳಲ ಬಾಗಿಲೊಳಿದರಾ || ೫೯ ||

ಆಗಲಿ, ಈ ಮರದ ಮರೆಯಲ್ಲಿ ನಿಂತು ನೋಡುವೆನು. (ಎಂದು ಸ್ವಲ್ಪ ನಡೆದು ಮರೆಯಾಗಿ ನಿಂತು ನೋಡಿ) *ಆಹ! ನೇತ್ರಾನಂದವನ್ನು ಹೊಂದಿದೆನು. ಇದೋ ನನ್ನ ಮನೋರಥಕ್ಕೆ ಪ್ರಿಯತಮೆಯಾದ ಶಕುಂತಳೆಯು, ಕುಸುಮಾಸ್ತರಣದಿಂದ ಕೂಡಿದ ಶಿಲಾಫಲಕದಲ್ಲಿ ಮಲಗಿ, ಸಖಿಯರಿಂದ ಸಂತೈಸಲ್ಪಡುತ್ತಿರುವಳು. ಒಳ್ಳೆಯದು ; ಇವರ ಸ್ವೇಚ್ಛಾಲಾಪಗಳನ್ನು ಕೇಳುವೆನು. (ಎಂದು ನೋಡುತ್ತ ನಿಂತಿರುವನು)-

(ಅನಂತರ ಪೂರ್ವೋಕ್ತ ವ್ಯಾಪಾರವುಳ್ಳ ಶಕುಂತಳೆ ಸಖಿಯರೊಡನೆ ಪ್ರವೇಶಿಸುವಳು)

---

*ರಾಗ—ಬೇಹಾಗ್. ರೂಪಕತಾಳ.

ಕಂಡೆನೆನ್ನ ಕಾಮಿತಾರ್ಥ ಕಲ್ಪವಲ್ಲಿಯಾ | ಸ್ತ್ರೀಮಂಡಲಮಣಿಯಾ || ಪ || ಪಾಸಿದ ಪೂ | ವಾಸಿನೊಳು ಸ್ಮ | ರಾಸಿಯಂದದಿ | ಮಲಗಿಹಳೀ ಮಡದಿ || ೧ || ಬಳಸಿ ಚಿತ್ತವೆಳಸಿದಂತೆ | ಕೆಳದಿಯರ್ಕಳು | ಬಳಿಯೊಳು ಸೇವಿಪರು || ೨ || ಕೇಳುತಿರ್ಪೆನಿಲ್ಲಿ ಮುದದಿ | ಪೇಳುವಿವರ | ಸ್ವೇ | ಚ್ಛಾಲಾಪಗಳ || ೩ ||

ಸಖಿಯರು—(ಬೀಸುತ್ತ ಸ್ನೇಹದಿಂದ ಕೂಡಿ) ಎಲೆ ಸಖಿ ಶಕುಂತಳೆ, ತಾವರೆಯೆಲೆಯ ಗಾಳಿಯು ನಿನಗೆ ಹಿತವಾಗಿರುವುದೆ ?

ಶಕುಂ—ಎಲೌ ಸಖಿಯರೆ, ತಾವರೆಯೆಲೆಯಿಂದ ನನ್ನನ್ನು ಏತಕ್ಕೆ ಬೀಸುವಿರಿ ?

(ಸಖಿಯರು ದುಃಖವನ್ನು ಅಭಿನಯಿಸಿ ಒಬ್ಬರನ್ನೊಬ್ಬರು ನೋಡುವರು)

ರಾಜಂ—ಅಯ್ಯೋ ! ಶಕುಂತಳೆ ಬಹಳ ಬಳಲಿರುವಂತೆ ಕಾಣುವಳು ; (ಆಲೋಚಿಸಿ) ಇದೇನು ಆತಪದೋಷವಾಗಿರಬಹುದೆ ? ಅಲ್ಲದಿದ್ದರೆ ನನ್ನ ಮನಸ್ಸಿನಲ್ಲಿರುವಂತೆ ಇದ್ದೀತೆ ? (ಅಭಿಲಾಷೆಯಿಂದ ನೋಡಿ) ಅಥವಾ ಸಂಶಯವೇತಕ್ಕೆ ?

ವೃತ್ತ || ಕರವಿಸ್ರಂಸಿಮೃಣಾಳಕಂಕಣದೆ ವಕ್ಷೋಜಾರ್ಪಿತೋಶೀರದಿಂ
ಬೆರೆದೀ ಮತ್ಪ್ರಿಯೆಯಂಗಮಿಂತುಮಳಲಾಂತುಂ ನೋಡೆ ಕಣ್ಗೊಪ್ಪುಗುಂ |
ಪರಿತಾಪಂ ಸಮಮಾದೊಡಂ ಮನಸಿಜಗ್ರೀಷ್ಮಪ್ರಸಾರಂಗಳೊಳ್
ತರುಣೀಸಂಕುಲದೊಳ್ ನಿದಾಘಪರಿತಾಪಂ ರಮ್ಯಮಲ್ತೀತೆರಂ || ೬೦ ||

ಪ್ರಿಯಂ—(ಶಕುಂತಳೆಗೆ ಮರೆಯಾಗಿ) ಎಲೆ ಅನಸೂಯೆ, ಆ ರಾಜರ್ಷಿಯನ್ನು ನೋಡಿದುದು ಮೊದಲಾಗಿ ಶಕುಂತಳೆ ಪರ್ಯುತ್ಸುಕಳಾಗಿರುವಂತಿದೆ. ಈಕೆಯ ಆತಂಕಕ್ಕೆ ಆತನೇ ನಿಮಿತ್ತವಾಗಿರಬಹುದೋ ಏನೋ !

ಅನ—ಎಲೆ ಸಖಿ, ನನ್ನ ಮನಸ್ಸಿಗೂ ಹೀಗೇ ತೋರುವುದು. ಒಳ್ಳೆಯದು ; ಇವಳನ್ನು ಕೇಳುವೆನು. (ಪ್ರಕಾಶವಾಗಿ) ಸಖಿ ಶಕುಂತಳೆ, ಒಂದು ವಿಷಯವನ್ನು ಕುರಿತು ನಿನ್ನನ್ನು ಕೇಳಬೇಕಾಗಿದೆ. ನಿನ್ನ ಸಂತಾಪವಾದರೊ ಹೆಚ್ಚಾಗಿರುವುದು.

ಶಕುಂ—(ಮಲಗಿದ್ದ ಹಾಗೆ ಅರ್ಧ ಎದ್ದು) ಎಲೆ ಸಖಿ, ಏನನ್ನು ಕೇಳಲಿಚ್ಛೈಸುವೆ ?

ಅನ—ಎಲೆ ಸಖಿ, ಮನ್ಮಥವೃತ್ತಾಂತವನ್ನಾದರೋ ನಾವು ಅರಿತವರೇ ಅಲ್ಲ. ಆದರೆ, ಪುರುಷರಲ್ಲಿ ಅನುರಕ್ತೆಯರಾದವರ ಅವಸ್ಥೆಯನ್ನು ಇತಿಹಾಸಗಳಲ್ಲಿ ಕೇಳಿ ಬಲ್ಲೆವು. ನಿನ್ನ ಅವಸ್ಥೆಯೂ ಹಾಗೆಯೇ ಇರುವುದು. ಹೇಳು, ನಿನ್ನ ಸಂತಾಪಕ್ಕೆ ನಿಮಿತ್ತವೇನು ? ತಾಪಕ್ಕೆ ನಿಮಿತ್ತವನ್ನು ನಿಜವಾಗಿ ತಿಳಿಯದೆ ಪರಿಹರಿಸಲು ಪ್ರಾರಂಭಿಸಕೂಡದಷ್ಟೆ ?

ರಾಜಂ—ನನ್ನ ಮನಸ್ಸಿನಲ್ಲಿ ಉಂಟಾದ ವಿಚಾರವು ಅನಸೂಯೆಯಲ್ಲಿಯೂ ಸಂಭವಿಸಿತು.

ಶಕುಂ—(ತನ್ನಲ್ಲಿ ತಾನು) ನನ್ನ ಅಭಿಲಾಷೆಯಾದರೋ ಬಲೀಯವಾಗಿದೆ. ಅದನ್ನು ಶೀಘ್ರವಾಗಿ ಇವರಿಗೂ ತಿಳಿಸಲಾರೆನು.

ಪ್ರಿಯಂ—ಸಖಿ ಶಕುಂತಳೆ, ಈಕೆ ಚೆನ್ನಾಗಿ ಹೇಳಿದಳು. ಏತಕ್ಕೆ ನಿನ್ನ ಆತಂಕವನ್ನು ನೀನೇ ಉಪೇಕ್ಷಿಸುವೆ? ದಿನೇದಿನೇ ಬಡವಾಗುತ್ತಿರುವೆ; ಆದರೂ ನಿನ್ನ ಶರೀರದ ಕಾಂತಿ ಕುಂದದಿರುವುದು.

ರಾಜಂ—ಪ್ರಿಯಂವದೆ ಹೇಳಿದುದು ನಿಜ; ಹಾಗೆಯೇ ಸರಿ.

ವೃತ್ತ || ಇಳಿದತ್ತಂಸಂ ಕಪೋಲಂ ಕಡುಬಡವೆನಿಕುಂ ಬಿಣ್ಪು ನೀಗಿತ್ತುರೋಜಂ
ಬೆಳರ್ವಣ್ಣಂ ಮೆಯ್ಗೆ ತೀವಿತ್ತಸಿಯನಡು ಬಳಲ್ದಿರ್ದುದಿಂತಿರ್ದುಮಿಾಕೋ|
ಮಳೆ ಕಾಮಕ್ಲಿಷ್ಟೆ ಚಿತ್ತಕ್ಕಳಲನೊಲವುಮಂ ಪುಟ್ಟಿಪಳ್ ನೋಡೆ ಪತ್ರಾ
ವಳಿ ಶೋಷಂಬೆತ್ತ ಚೈತ್ರಾಗಮಪವನಪರಿಸ್ಪೃಷ್ಟ ವಾಸಂತಿಯಾವೋಲ್ ||

ಶಕುಂ—ಎಲೆ ಸಖಿ ಇನ್ನು ಯಾರಿಗೆ ಹೇಳಲಿ? ಆದರೆ ನಿಮ್ಮನ್ನು ಆಯಾಸಪಡಿಸುವವಳಾಗುವೆನು.

ಇಬ್ಬರೂ—ಆದುದರಿಂದಲೇ ಇಷ್ಟು ನಿರ್ಬಂಧವು. ಆಪ್ತರಲ್ಲಿ ಹೇಳಿಕೊಂಡ ದುಃಖವು ಸ್ವಲ್ಪ ಕಡಿಮೆಯಾಗುವುದಿಲ್ಲವೆ?

ರಾಜಂ—ವೃತ್ತ || ಸಮಸುಖದುಃಖವಾದ ಜನವೀಕೆಯನೀಪರಿಯಿಂದ ಕೇಳಲೀ
ರಮಣಿಯಿವರ್ಗೆ ಪೇಳದಿರಲಾರ್ಪಳೆ ಮಾನಸದಾಧಿಹೇತುವಂ|
ಗಮಿಸುತೆ ಪಿಂದಿರುಂಗಿದಿವಳೊಲ್ಮೆಯ ನೋಟದೆ ಕೂರ್ತಳೆಂಬ ಭಾ
ವಮಸರಿದಿರ್ದೊಡಂ ಕಳವಳಂಬಡುಗುಂ ಮನಮಾಲಿಪನ್ನೆಗಂ ||

ಶಕುಂ—*ಎಲೆ ಸಖಿ, ತಪೋವನರಕ್ಷಕನಾಗಿ ಬಂದ ಆ ರಾಜರ್ಷಿಯನ್ನು ನೋಡಿದುದು ಮೊದಲಾಗಿ—(ಎಂದೊಡನೆ ಲಜ್ಜೆಯನ್ನು ನಟಿಸುವಳು)

ಇಬ್ಬರೂ—ಎಲೆ ಪ್ರಿಯಸಖಿ, ಹೇಳು ಲಜ್ಜೆಯೇತಕ್ಕೆ?

ಶಕುಂ—ಆತನಲ್ಲಿ ಉಂಟಾದ ಅಭಿಲಾಷೆಯಿಂದ ಈ ಅವಸ್ಥೆಯನ್ನು ಹೊಂದಿದೆನು.

---

*ರಾಗ—ಕಾಪಿ. ಆದಿತಾಳ.

ಎಂತು ಸೈರಿಪೆ ಸಖೀ | ಚಿಂತೆಯ ರಾಕೇಂದುಮುಖೀ || ಪ || ಎಂದಾರಾಯನ ನಗೆಮೊಗ | ದಂದವನಾನೀಕ್ಷಿಸಿದೆನೊ || ಅಂದುಮೊದಲೀಕಾಮನ | ದಂದುಗಕೊಳಗಾದೆನೌ || ೧ || ತಾಪವನಾರಿಸಲಾಪುದು | ಭೂಪನ ಕಾರುಣ್ಯಾಮೃತ || ಲೇಪವದೊಂದಲ್ಲದೆ ಬೇ | ರೇಪರಿಯಿಂದಪ್ಪುದೌ ||೨|| ಅಭಿಮತವಾದೊಡೆ ನಿಮಗಾ | ವಿಭುವನು ಕೈಗೂಡಿಪೆವೆಂ || ದಭಯವ ಕೊಡಿಯಲ್ಲದೊಡೆ | ನ್ನಭಿಲಾಷೆಯನೇ ಬಿಡಿ || ೩ ||

ರಾಜಂ—(ಸಂತೋಷದಿಂದ ಕೂಡಿ) ಕೇಳತಕ್ಕುದನ್ನು ಕೇಳಿದೆನು !

ಕಂದ || ಮನಸಿಜನೆ ತಾಪಕಾರಣ
ನೆನಿಸಿದನೆನಗವನೆ ಸೌಖ್ಯಕಾರಕನಾದಂ |
ಘನನೀಲಮಾದ ದಿವಸಂ
ಜನಮಂ ಸಂತೋಷಿಪಂತೆ ಬೇಸಗೆ ಪೋಗಲ್ || ೬೩ ||

ಶಕುಂ—ಅದು ನಿಮಗೆ ಸಮ್ಮತವಾದರೆ, ನನ್ನಲ್ಲಿ ಆ ರಾಜಋಷಿಗೆ ದಯೆಯುಂಟಾಗುವಂತೆ ಯತ್ನಿಸಿರಿ; ಇಲ್ಲದ ಪಕ್ಷದಲ್ಲಿ, ಅವಶ್ಯವಾಗಿ ನನಗೆ ತಿಲೋದಕವನ್ನು ಬಿಡಿ.

ರಾಜಂ—ಇದೀಗ ಸಂದೇಹಪರಿಹಾರಕವಾದ ಮಾತು.

ಪ್ರಿಯಂ—(ಶಕುಂತಳೆಗೆ ಮರೆಯಾಗಿ) ಎಲೆ ಅನಸೂಯೆ, ಇವಳ ಮನ್ಮಥಾವಸ್ಥೆ ಮೀರುತ್ತಾ ಬಂದಿತು; ಇನ್ನು ಕಾಲಹರಣ ಮಾಡಿದರೆ ಇವಳು ಸೈರಿಸಲಾರಳು. ಈಕೆ ಯಾವ ಪುರುಷನಲ್ಲಿ ಅನುರಕ್ತೆಯಾಗಿರುವಳೋ ಆತನು ಪುರುಕುಲಕ್ಕೆ ಅಲಂಕಾರಭೂತನು ; ಆದುದರಿಂದ ಇವಳ ಅಭಿಲಾಷೆ ಶ್ಲಾಘ್ಯವಾದುದು.

ಅನ—ಹೌದು ; ನೀನು ಹೇಳಿದುದು ಸರಿ.

ಪ್ರಿಯಂ—(ಪ್ರಕಾಶವಾಗಿ) ಎಲೆ ಸಖಿ, ಇವಳ ಅಭಿಲಾಷೆ ದೈವಯೋಗದಿಂದ ಅನುರೂಪವಸ್ತುವನ್ನೇ ಸೇರಿತು. ಮಹಾನದಿಯು ಸಮುದ್ರವನ್ನು ಬಿಟ್ಟು ಇನ್ನೆಲ್ಲಿ ತಾನೆ ಸೇರುವುದು ? ಮಾವಿನ ಮರವಲ್ಲದೆ ಪಲ್ಲವಿಸಿದ ಮಲ್ಲಿಕಾಲತೆಗೆ ಇನ್ನಾವ ಮರ ತಾನೇ ಆಶ್ರಯವಾದೀತು ?

ರಾಜಂ—ವಿಶಾಖಾನಕ್ಷತ್ರಗಳು ಚಂದ್ರಕಳೆಯನ್ನು ಅನುಸರಿಸಿ ಹೋಗುವ ವಿಷಯದಲ್ಲಿ ಆಶ್ಚರ್ಯವೇನು ?

ಅನ—ಎಲೆ ಪ್ರಿಯಂವದೆ, ನಮ್ಮ ಸಖಿಯ ಮನೋರಥವನ್ನು ಶೀಘ್ರವಾಗಿಯೂ ಗುಟ್ಟಾಗಿಯೂ ನೆರವೇರಿಸುವುದಕ್ಕೆ ತಕ್ಕ ಉಪಾಯ ಯಾವುದು ?

ಪ್ರಿಯಂ—ಗುಟ್ಟಾಗಿ ನೆರವೇರಿಸುವುದು ತಾನೇ ಯೋಚಿಸತಕ್ಕುದಾಗಿದೆ ; ಶೀಘ್ರವಾಗಿ ನೆರವೇರಿಸುವುದೇನೂ ಕಷ್ಟವಲ್ಲ.

ಅನ—ಅದು ಹೇಗೆ ? ಹೇಳು.

ಪ್ರಿಯಂ—ಕೇಳು, ಆ ರಾಜಋಷಿಯು ಇವಳಲ್ಲಿ ಸ್ನೇಹಯುಕ್ತವಾದ ದೃಷ್ಟಿಯಿಂದ ತನ್ನ ಅಭಿಲಾಷೆಯನ್ನು ಸೂಚಿಸಿರುವನು. ಆದುದರಿಂದ ಈ ದಿವಸಗಳಲ್ಲಿ ನಿದ್ರೆಯಿಲ್ಲದೆ ಕೃಶನಾಗಿರುವ ಹಾಗೆ ತೋರುತ್ತದೆ.

ರಾಜಂ—(ತನ್ನ ಶರೀರವನ್ನು ನೋಡಿಕೊಂಡು) ನಿಜ, ಈಕೆ ಹೇಳಿದ ಹಾಗೆಯೇ ಇರುವೆನು. ಹೇಗೆಂದರೆ:

ವೃತ್ತ || ಇರುಳಿರುಳಲ್ಲಿ ಚಿತ್ತದನುತಾಪದೆ ತೋಳೆಡೆಗಿಟ್ಟಪಾಂಗದಿಂ
೧೫೦ ಸುರಿವ ಕದುಷ್ಣಬಾಷ್ಪದೆ ವಿವರ್ಣಮಣೀಕೃತವಾಗಿ ನಿಂದು ಬಿ|
ಲ್ದಿರುವಿನ ಘಾತಜಾತಕಿಣಮೊತ್ತೆ ಸಡಿಲ್ದು ಸಡಿಲ್ದು ಬರ್ಪ ರ
ತ್ನರುಚಿರಹೇಮಕಂಕಣವನೇರಿಪೆನಾಂ ಮಣಿಬಂಧದತ್ತಣಿಂ || ೬೪ ||

ಪ್ರಿಯಂ—(ಆಲೋಚಿಸಿ) ಅನಸೂಯೆ, ಆತನಿಗೆ ಇವಳು ಒಂದು ಅನುರಾಗ ಪತ್ರಿಕೆಯನ್ನು ಬರೆಯಲಿ; ಅದನ್ನು ಹೂವಿಂದ ಮುಚ್ಚಿ ದೇವತಾ ಪ್ರಸಾದದ ನೆವದಿಂದ ಆ ರಾಜನ ಹಸ್ತವನ್ನು ಸೇರಿಸುವೆನು.

ಅನ—ಈ ಸುಲಭೋಪಾಯವು ನನಗೆ ಒಪ್ಪಿತು. ಶಕುಂತಳೆ ಏನು ಹೇಳುವಳೋ?

ಶಕುಂ—ಸಖಿಯರೆ, ನಿಮ್ಮಾಜ್ಞೆಯನ್ನು ನಾನು ಮೀರುವೆನೇ?

ಪ್ರಿಯಂ—ಹಾಗಾದರೆ, ನಿನ್ನ ಅಭಿಪ್ರಾಯಾನುಸಾರವಾಗಿ ಲಲಿತವಾದೊಂದು ಪದ್ಯವನ್ನು ಯೋಚಿಸು.

ಶಕುಂ—ಯೋಚಿಸುವೆನು; ಆದರೆ, ನಾನು ಬರೆದುದನ್ನು ಆ ಮಹಾರಾಜನು ತಿರಸ್ಕರಿಸುವನೇನೋ ಎಂದು ನನ್ನ ಮನಸ್ಸು ನಡುಗುವುದು.

ರಾಜಂ—(ಸಂತೋಷಯುಕ್ತನಾಗಿ)

ಕಂದ || ಭೀರುವೆ ಚಿಂತಿಸುವೆ ತಿರ
ಸ್ಕಾರವ ನೀನಾವನತ್ತಣಿಂದವನೀಗಳ್ |
ಪಾರುತ್ತಿರ್ಪಂ ನಿನ್ನನೆ
ಸೇರಲ್ ಬರೆ ಭಾಗ್ಯಲಕ್ಷ್ಮಿ ಬಿಡುವನೆ ಬಡವಂ || ೬೫ ||

ಸಖಿಯರು—ಎಲೆ ಸ್ವಗುಣವನ್ನು ಅವಮಾನಿಸುವವಳೆ, ಶರೀರವನ್ನು ಸುಖಪಡಿಸುವ ಶರತ್ಕಾಲದ ಬೆಳದಿಂಗಳನ್ನು ಯಾರುತಾನೆ ವಸ್ತ್ರದ ಸೆರಗಿನಿಂದ ನಿವಾರಿಸುವರು?

ಶಕುಂ—(ನಸುನಗುತ್ತ) ಇನ್ನು ನಿಮ್ಮಾಜ್ಞೆಯನ್ನು ನೆರವೇರಿಸುವೆನು. (ಎಂದು ಕುಳಿತು ಯೋಚಿಸುವಳು)

ರಾಜಂ—ರೆಪ್ಪೆಹಾಕುವುದನ್ನು ಮರೆದ ಕಣ್ಣುಗಳಿಂದ ನಾನು ಪ್ರಿಯೆಯನ್ನು ನೋಡುವುದು ಯುಕ್ತವೇ ಸರಿ. ಏತಕ್ಕೆಂದರೆ:

ಕಂದ || ಮೃದುಪದಬಂಧವನೆಸಗುವ
ಸುದತಿಯು ನಿಮಿರ್ದೆತ್ತಿದೊಂದು ಪುರ್ವಿಂ ಮೆರೆವೀ |
ವದನಂ ಪುಲಕಂಗೂಡಿದ
ಕದಪಿಂ ಕನ್ನಡಿಪುದೆನ್ನೊಳಿರ್ಪಭಿರತಿಯಂ || ೬೬ ||

ಶಕುಂ—ಎಲೌ ಸಖಿಯರೆ, ಒಂದು ಗೀತಿಯನ್ನು ಆಲೋಚಿಸಿರುವೆನು; ಲೇಖನ ಸಾಮಗ್ರಿ ಸಮೀಪದಲ್ಲಿಲ್ಲವಲ್ಲ?

ಪ್ರಿಯಂ—ಶುಕೋದರದಂತೆ ಕೋಮಲವಾದ ಈ ತಾವರೆಯೆಲೆಯಲ್ಲಿ ಉಗುರುಗಳಿಂದ ಬರೆ.

ಶಕುಂ—(ಹೇಳಿದಂತೆ ಬರೆದು) ಸಖಿಯರೆ, ಕೇಳಿರಿ; ಇದೇನು ಅರ್ಥ ಸಂಗತವಾಗಿರುವುದೋ ಇಲ್ಲವೋ?

ಇಬ್ಬರೂ—ಹೇಳು; ಕೇಳುವುದಕ್ಕೆ ಸಿದ್ಧವಾಗಿರುವೆವು.

ಶಕುಂ—(ಓದುವಳು)

ಕಂದ || ನಾನರಿದಳಲ್ತು ನಿನ್ನಯ
ಮಾನಸಮಂ ಮದನನಾದೊಡಿರುಳುಂ ಪಗಲುಂ |
ಹಾ ನಿರ್ದಯ ತಪಿಸುವನಕ
ಟಾ ನಿನ್ನೊಳ್ ಕೂಡಲೆಳಸಿದೆನ್ನಂಗಗಳಂ || ೬೭ ||

ರಾಜಂ—(ಬೇಗನೆ ಸಮೀಪಕ್ಕೆ ಬಂದು)

*ಕಂದ || ತನುಗಾತ್ರಿ ನಿನ್ನ ತಪಿಪಂ
ಮನಸಿಜನಾವಗಮುಮೆನ್ನನಾದೊಡೆ ದಹಿಪಂ |
ವನಜಾರಿಯು ಕಂದಿಪವೋಲ್
ದಿನಮದು ಕುಮುದಿನಿಯ ಪಿರಿದು ಕಂದಿಸಿದಪುದೇಂ || ೬೮ ||

ಸಖಿಯರು—(ನೋಡಿ ಸಂತೋಷದೊಡನೆ ಎದ್ದು) ಸಾವಕಾಶವಿಲ್ಲದ ಮನೋರಥಕ್ಕೆ ಸುಖಾಗಮನವೆ?

---

***ರಾಗ—ತೋಡಿ. ರೂಪಕತಾಳ.**

**ಭಾವವನರಿಯದೆ ಕಾಮಿನಿ | ಪೇಳ | ಲೇವೇಳ್ವೆನು ಗಜಗಾಮಿನಿ | ಎನ್ನ ಭಾವ || ಪ || ಸ್ಮರ ನಿನ್ನ ತಪಿಸುತ | ಲಿರುತಿಹನೆನ್ನ ನಾ | ದರೆ ಸುಡುತಿಹನೆಲೆ ಸುಂದರಿ || ೧ || ಹಗಲು ಚಂದ್ರಮನ ತಾಂ ಹಗರಣಗೊಳಿಪಂತೆ | ಮುಗುದೆ ನೈದಿಲೆಯನು ಕಾಡದು || ೨ || ಹಾ ನಿರ್ದಯನೆಂದು | ನೀನೆಂದ ಮಾತೆನ್ನ | ಮಾನಸವನು ಚುಚ್ಚುತಿರ್ಪುದು || ೩ ||**

ಶಕುಂ—(ಏಳುವುದಕ್ಕೆ ಇಚ್ಛೈಸುವಳು)

ರಾಜಂ—ಸಾಕು, ಸಾಕು, ಆಯಾಸವೇತಕ್ಕೆ?

*ಕಂದ || ಪರಿತಾಪದಿನಲರ್ವಾಸೊಳ್
ಪೊರಳ್ದು ಮೇಣ್ ಧೂಸರಾಂತ ಬಿಸಖಂಡಗಳಿಂ |
ಪರಿಮಳಿಪ ನಿನ್ನ ಮೆಲ್ಲೊಡ
ಲಿರದೇಳುತ್ತೆಂತಿದೆನ್ನನಿಂದುಪಚರಿಕುಂ || ೭೯ ||

ಅನ—ಎಲೈ ಮಿತ್ರನೆ, ಈ ಶಿಲಾತಲದ ಒಂದು ಭಾಗವನ್ನು ಅಲಂಕರಿಸಬೇಕು.

(ರಾಜನು ಕುಳಿತುಕೊಳ್ಳುವನು. ಶಕುಂತಳೆ ಲಜ್ಜೆಯೊಡನೆ ನಿಂತಿರುವಳು.)

ಪ್ರಿಯಂ—ಎಲೈ ಮಿತ್ರನೆ, ನಿಮ್ಮಿಬ್ಬರ ಅನುರಾಗವು ಪ್ರತ್ಯಕ್ಷವಾಗಿರುವುದು; ಹಾಗಾದರೂ ಸಖೀಸ್ನೇಹವು ನನ್ನನ್ನು ಹೇಳಿದುದನ್ನೇ ಹೇಳುವಂತೆ ಮಾಡುವುದು.

ರಾಜಂ—ಎಲೌ ಮಂಗಳಾಂಗಿಯೆ, ಇದು ಹೇಳದೆ ಬಿಡತಕ್ಕುದಲ್ಲ; ಹೇಳಬೇಕಾದುದನ್ನು ಹೇಳದಿದ್ದರೆ ಅನುತಾಪವನ್ನುಂಟುಮಾಡುವುದು.

ಪ್ರಿಯಂ—ರಾಜನಾದವನು ತನ್ನ ದೇಶದಲ್ಲಿ ವಿಪತ್ತನ್ನು ಹೊಂದಿದ ಜನದ ದುಃಖವನ್ನು ಹೋಗಲಾಡಿಸತಕ್ಕವನು; ಇದು ನಿಮಗೆ ಧರ್ಮವಲ್ಲವೆ?

ರಾಜಂ—ಇದಕ್ಕಿಂತಲೂ ಬೇರೆ ಇನ್ನೊಂದಿಲ್ಲ.

ಪ್ರಿಯಂ—†ಕೇಳು; ಈ ನಮ್ಮ ಪ್ರಿಯಸಖಿಯು ನಿನಗಾಗಿಯೇ ಪೂಜ್ಯನಾದ ಮನ್ಮಥನಿಂದ ಈ ಅವಸ್ಥೆಗೆ ಒಳಗಾದಳು. ಆದುದರಿಂದ ದಯವಿಟ್ಟು ನೀನು ಈಕೆಯ ಪ್ರಾಣವನ್ನು ಉಳಿಸತಕ್ಕುದು.

---

*ರಾಗ—ಮೋಹನಕಲ್ಯಾಣಿ. ಆದಿತಾಳ.

ಏಳಬೇಡವೇ ಪ್ರಿಯೆ ನೀನೇಳಬೇಡವೆ || ಪ || ಬಾಲಿಯೆ ಮೃದಿತಮೃ | ಣಾಳವೆನಿಪ ನಳಿ | ತೋಳನೂರಿ ನೀ | ನೇಳುವುದೆಂತಕಟೇಳಬೇಡವೆ || ೧ || ಗುರುಪರಿತಾಪದೆ | ಕೊರಗಿದೊಡಲಿದುಪ | ಚರಿಸೆ ಶಕ್ಯವೇ ತರುಣೀಮಣಿ ನೀನೇಳ || ೨ || ಆಯಸವೇಕಿನಿ | ತಾಯತಾಕ್ಷಿ ನೀಂ | ನೋಯದಿರಲು ನನ | ಗಾಯಿತಖಿಲವಿರದೇಳಬೇಡವೆ || ೩ ||

†ರಾಗ—ಶಂಕರಾಭರಣ. ಆದಿತಾಳ.

ಚಿತ್ತವಿಪುದು ಭೂಪನೆ | ಚಿತ್ತಜರೂಪನೆ || ಪ || ಈ ಶಶಿಮುಖಿಯು | ದ್ದೇಶಿಸಿ ನಿನ್ನನೆ | ಕ್ಲೇಶಪಡುವಳು ಕು | ಶೇಶಯಶರನಿಂ || ೧ || ಪೇಳಲೇನಿವಳ | ಬಾಳುವೆ ನಿನ್ನ ಕೃ | ಪಾಲೋಕದೊಳಿಹು | ದಾಲೋಚಿಸು ನೀಂ || ೨ || ಅದರಿಂದೀಕೆಯ ಮದುವೆಯಾಗಿ ನೀಂ | ಬದುಕಿಪುದೊಲವಿಂ | ಸದಯಹೃದಯನೆ || ೩ ||

ರಾಜಂ—ಎಲೌ ಮಂಗಳಾಂಗಿಯೇ, ಈ ಪ್ರಾರ್ಥನೆ ಉಭಯ ಸಾಧಾರಣವಾದುದು. ಸರ್ವಪ್ರಕಾರದಿಂದಲೂ ಅನುಗ್ರಹಿಸಲ್ಪಟ್ಟೆನು.

ಶಕುಂ—(ಪ್ರಿಯಂವದೆಯನ್ನು ನೋಡಿ) ಎಲೆ ಸಖಿ, ರಾಣೀವಾಸವನ್ನಗಲಿ ಹಂಬಲಿಸುವ ರಾಜರ್ಷಿಯನ್ನು ಏತಕ್ಕೆ ನಿರ್ಬಂಧಪಡಿಸುವೆ ?

ರಾಜಂ—ಎಲೆ ಸುಂದರಿ,

ಕಂದ || ಮದಿರಾಕ್ಷಿ ನಿನ್ನೊಳಲ್ಲದೆ
ಹೃದಯಂ ಪೆರಳಲ್ಲಿ ಸೇರದಿರ್ಪುದನರಿದುಂ |
ಹೃದಯಗತೆಯೆನಿಸಿ ನೀನುಸಿ
ರಿದೊಡಿಂತಾಂ ಮಗುಳೆ ಮದನನಿಂ ಹತನಾದೆಂ || ೭೦ ||

ಅನ—ಎಲೈ ಮಿತ್ರನೆ, ‘ ರಾಜಾನೋ ಬಹುವಲ್ಲಭಾಃ ’ ಎಂದು ಕೇಳಿರುವೆವು. ನಮ್ಮ ಪ್ರಿಯಸಖಿಯ ವಿಷಯದಲ್ಲಿ ಬಂಧುಜನರು ವ್ಯಸನಪಡದ ಹಾಗೆ ನೀನು ನಿರ್ವಹಿಸಿಕೊಳ್ಳಬೇಕು.

ರಾಜಂ—ಎಲೌ ಮಂಗಳಾಂಗಿಯೇ, ಬಹಳ ಮಾತುಗಳಿಂದೇನು ?

ಕಂದ || ಪಲವರಸಿಯರೆನಗಿರ್ದುಂ
ಕುಲದುತ್ಕರ್ಷಾಸ್ಪದಂಗಳೆನಿಸುಗುಮಿರ್ವರ್ |
ಜಲನಿಧಿರಶನಾಂಚಿತೆಯಾ
ದಿಳೆಯುಂ ನಿಮ್ಮಿರ್ವರಿಷ್ಟಸಖಿಯಾದಿವಳುಂ || ೭೧ ||

ಸಖಿಯರಿಬ್ಬರೂ—ನಿಶ್ಚಿಂತರಾದೆವು.

ಪ್ರಿಯಂ—(ಕಣ್ಣಸನ್ನೆಯಿಂದ) ಎಲೆ ಅನಸೂಯೆ, ಈ ಜಿಂಕೆಮರಿಯು ತಾಯನ್ನು ಕಾಣದೆ ಕಳವಳಗೊಂಡು ಇತ್ತತ್ತ ಹುಡುಕುತ್ತಿರುವುದು ; ನಡೆ, ಇದನ್ನು ಸೇರಿಸೋಣ. (ಎಂದು ಹೊರಡುವರು)

ಶಕುಂ—ಎಲೌ ಸಖಿಯರೆ, ನನಗೆ ರಕ್ಷಕರು ಯಾರು ? ಇಬ್ಬರಲ್ಲಿ ಯಾರಾದರೂ ಒಬ್ಬರು ಬನ್ನಿ.

ಇಬ್ಬರೂ—ಭೂಮಂಡಲಕ್ಕೆ ರಕ್ಷಕನಾದವನೇ ನಿನ್ನ ಸಮೀಪದಲ್ಲಿರುವನು. (ಎಂದು ಹೊರಟು ಹೋಗುವರು)

ಶಕುಂ—ಇನ್ನೇನುಗತಿ, ಹೊರಟೇ ಹೋದರು !

ರಾಜಂ—ಸಾಕು, ಸಾಕು, ಏತಕ್ಕೆ ಭಯಪಡುವೆ ? ಆರಾಧಿಸುವ ಜನವು ನಿನ್ನ ಸಮೀಪದಲ್ಲಿಯೇ ಇಲ್ಲವೆ ?

೩೬೦

ವೃತ್ತ || ಬಳಲಿಕೆ ಪಿಂಗುವಂತೆ ನಿನಗಾಂ ನಳಿನೀದಳತಾಳವೃಂತದಿಂ
ಸುಳಿಯಿಪೆನೇಂ ಕುಳಿರ್ಮಸಪ ತಂಬೆಲರಂ ಕರಭೋಪಮೋರು ಮೇಣ್ |
ತಳೆದು ಮದಂಕದೊಳ್ ಮಲರ್ದ ತಾವರೆಯಂತಿರೆ ಕೆಂಪನಾಂತು ಕಂ
ಗೊಳಿಸುವ ನಿನ್ನ ಮೆಲ್ಲಡಿಯನೊತ್ತುವೆನೇಂ ಸುಖಮಪ್ಪ ಮಾಳ್ಕೆಯಿಂ ||

ಶಕುಂ—ಮಾನನೀಯರ ವಿಷಯದಲ್ಲಿ ಸ್ವಾತಂತ್ರ್ಯದಿಂದ ನಡೆದು ನಾನು ಅಪರಾಧಕ್ಕೆ ಗುರಿಯಾಗುವವಳಲ್ಲ. (ಎಂದು ಎದ್ದು ಹೋಗುವಳು)

ರಾಜಂ—ಎಲೆ ಸುಂದರಿ, ಹಗಲಾದರೊ ಇನ್ನೂ ಕಳೆಯಲಿಲ್ಲ; ನಿನ್ನ ಅವಸ್ಥೆಯಾದರೊ ಈ ರೀತಿಯಾಗಿರುವುದು.

†ಕಂದ || ಉಳಿದು ಸುಮಶಯನಮಂ ಮೇಣ್
ನಳಿನೀದಳದಿಂದೆ ರಚಿಸಿದೆದೆಗುಪ್ಪಸಮಂ |
ಬಳಲಿಕೆಯಂ ತಳೆದಂಗದೆ
ನಳಿನಾಂಬಕೆ ನೀನದೆಂತು ಪೋದಪೆ ಬಿಸಿಲೊಳ್ || ೭೩ ||

(ಎಂದು ಬಲಾತ್ಕಾರದಿಂದ ಶಕುಂತಲೆಯನ್ನು ಹಿಂದಿರುಗಿಸುವನು)

ಶಕುಂ—ಪುರುಕುಲೋದ್ಭವನೆ, ನಿನ್ನ ಸುಶೀಲತೆಯನ್ನು ರಕ್ಷಿಸಿಕೊಳ್ಳುವುದು; ನಾನು ಮದನನ ಕೈಗೊಳಗಾಗಿದ್ದರೂ ಸ್ವಾತಂತ್ರ್ಯವನ್ನು ಅವಲಂಬಿಸುವಳಲ್ಲ.

ರಾಜಂ—§ ಎಲೆ ಭೀರುವೆ, ಗುರುಜನಗಳ ದೆಸೆಯಿಂದ ಏತಕ್ಕೆ ಭಯಪಡುವೆ? ಪೂಜ್ಯರಾದ ಕುಲಪತಿಗಳು ಈ ಸಂಗತಿಯನ್ನು ಕೇಳಿದಾಗ್ಯೂ ಧರ್ಮಜ್ಞರಾದ ಕಾರಣ ಈ ವಿಷಯದಲ್ಲಿ ದೋಷವನ್ನು ಗ್ರಹಿಸುವುದಿಲ್ಲ; ಕೇಳು—

ಕಂದ || ಸುದತಿಯೆ ಗಾಂಧರ್ವವಿವಾ
ಹದೆ ಬಹುರಾಜರ್ಷಿಕನ್ಯೆಯರ್ ಕೂರ್ತವರಂ |

---

†ರಾಗ—ನಾದನಾಮಕ್ರಿಯೆ. ಆದಿತಾಳ.

ಪೋಪೆಯದೇತಕೆ | ತಾಪಸಕನ್ಯಕೆ | ಈಪರಿ ಬಿಸಿಲೊಳು | ತಾಪವಾಂತೊಡಲೊಳು ||೧|| ಕುಸುಮದ ಶಯನವ | ಬಿಸಜಿನೀದಳಗಳಿಂ | ದೆಸಗಿದೆದೆಯ ಕು | ಪ್ಪಸವನು ಬಿಸುಡುತ ||೨|| ಹೊತ್ತಿಳಿವನ್ನೆಗ | ವಿತ್ತಬಾಬಾರೆಲೆ | ಮತ್ತಕಾಶಿನಿಯೆ ಮಾ | ರುತ್ತರವೀಯದೆ ||೩||

§ ರಾಗ—ಕಮಾಚ್. ಆದಿತಾಳ.

ಅಂಜುವೆಯೇತಕೆ | ಕಂಜಪತ್ರಾಂಬಕೆ ||ಪ|| ಗುರುಜನವರಿವರೆಂ | ಬುರುತರ ಭೀತಿಯ | ಧರಿಸುತೆ ಚಿತ್ತದಿ ||೧|| ನಮ್ಮಭಿಮತವನು | ನಿಮ್ಮವರರಿದರು | ಸಮ್ಮತಿಸುವರು ||೨|| ಪಾರ್ಥಿವನಾದೆನ್ನ | ಪ್ರಾರ್ಥನೆಯನು ನೀಂ | ಸಾರ್ಥಕವಾಗಿಸೆ ||೩||

ಪದಪಿಂದೆ ವರಿಸಿ ನಿಜಪಿತೃ
ಹೃದಯಕೆ ಮುದವಿತ್ತ ಕಥೆಯು ಕೇಳ್ದರಿಯೆಯು ನೀಂ || ೭೪ ||

ಶಕುಂ—ಆರ್ಯನೆ, ಸದ್ಯಕ್ಕೆ ನನ್ನನ್ನು ಬಿಡು; ಇನ್ನೊಂದುಬಾರಿ ಸಖೀಜನರ ಅನುಮತಿಯನ್ನು ಕೇಳುವೆನು.

ರಾಜಂ—ಆಗಲಿ ಬಿಡುವೆನು.

ಶಕುಂ—ಯಾವಾಗ?

ರಾಜಂ—ಕಂದ || ತುಂಬಿ ನವಾಂಬುಜದಲರೊಳ್
ತುಂಬಿದ ಮಕರಂದಕೆಳಸುತಾಸ್ವಾದಿಪವೋಲ್ |
ಅಂಬುರುಹವದನೆ ನಿನ್ನಯ
ಬಿಂಬಾಧರಮಧುರರಸವನೀಂಟಿದ ಬಳಿಕಾಂ || ೭೫ ||

(ಎಂದು ಶಕುಂತಳೆಯ ಮುಖವನ್ನು ಮೇಲಕ್ಕೆತ್ತುವುದಕ್ಕೆ ಇಚ್ಛೈಸುವನು. ಶಕುಂತಳೆ ನಾಟ್ಯದಿಂದ ಪರಿಹರಿಸುವಳು.)

ತೆರೆಯಲ್ಲಿ—ಎಲೆ ಚಕ್ರವಾಕಸ್ತ್ರೀಯೆ, ನಿನ್ನ ಸಹಚರನನ್ನು ಕುರಿತು ಮಾತಾಡಿಕೊ; ಸಂಜೆ ಸಮೀಪಿಸಿತು.

ಶಕುಂ—(ಕಿವಿಗೊಟ್ಟು ತ್ವರೆಯಿಂದ ಕೂಡಿ) ಪುರುಕುಲೋತ್ಪನ್ನನೆ, ನನ್ನ ಶರೀರದ ವೃತ್ತಾಂತವನ್ನು ತಿಳಿಯುವುದಕ್ಕೋಸ್ಕರ ಆರ್ಯೆಯಾದ ಗೌತಮಿಯು ಇತ್ತಲೆ ಬರುವಳು; ಆದುದರಿಂದ ಮರದ ಕೊಂಬೆಯಲ್ಲಿ ಮರೆಯಾಗು.

(ರಾಜನು ಶಕುಂತಳೆ ಹೇಳಿದ ಹಾಗೆ ಮರದ ಕೊಂಬೆಯಲ್ಲಿ ಮರೆಯಾಗಿರುವನು)

(ಅನಂತರ ಪಾತ್ರಹಸ್ತಳಾದ ತಾಪಸಿಯೂ ಸಖಿಯರೂ ಬರುವರು)

ಸಖಿಯರು—ಎಲೌ ಗೌತಮಿಯೆ, ಹೀಗೆ ಬರಬೇಕು.

ಗೌತಮಿ—(ಶಕುಂತಳೆಯ ಬಳಿಗೆ ಬಂದು) ಎಲೆ ಮಗಳೆ, ನಿನ್ನ ಶರೀರದ ತಾಪ ಕಡಿಮೆಯಾಗಿರುವುದೆ ಏನು?

ಶಕುಂ—ನನಗೆ ಸ್ವಲ್ಪ ಗುಣವಾಗಿದೆ.

ಗೌತಮಿ—ಮಂತ್ರಪೂತವಾದ ಈ ದರ್ಭೋದಕದಿಂದ ನಿನ್ನ ಶರೀರದ ಬಾಧೆಯೆಲ್ಲಾ ಪರಿಹಾರವಾಗುವುದು. (ಎಂದು ಶಕುಂತಳೆಯ ಶಿರಸ್ಸಿನಲ್ಲಿ ಪ್ರೋಕ್ಷಿಸಿ) ಮಗಳೆ, ಹಗಲು ಕಳಿಯಿತು; ನಡೆ, ಪರ್ಣಶಾಲೆಗೆ ಹೋಗೋಣ. (ಎಂದು ಹೊರಡುವರು)

ಶಕುಂ—(ತನ್ನಲ್ಲಿ ತಾನು) ಎಲೆ ಮನಸ್ಸೆ, ಸುಖದಿಂದ ಮನೋರಥ ಕೈಗೂಡಿದಾಗ ಕಳವಳವನ್ನು ಬಿಡದೆ ಹೋದೆ. ಈಗ ಅಗಲಿ ಹಂಬಲಿಸುವ ನಿನಗೇನು ಮಾಡಲಿ?

(ಎರಡನೆಯ ಹೆಜ್ಜೆಯಲ್ಲಿ ನಿಂತು ಪ್ರಕಾಶವಾಗಿ) ಅತನುತಾಪಹರವಾದ ಲತಾಲಯುವೆ, ಪುನಶ್ಚ ಉಪಭೋಗಕ್ಕೋಸ್ಕರ ಪ್ರಸಂಗಿಸುವೆನು.

(ಎಂದು ಅತಿದುಃಖದಿಂದ ಇತರರ ಸಂಗಡ ಹೋಗುವಳು)

ರಾಜಂ—(ಮೊದಲಿದ್ದ ಸ್ಥಾನವನ್ನು ಕುರಿತು ಬಂದು ನಿಟ್ಟುಸಿರನ್ನು ಬಿಟ್ಟು) § ಆಃ ! ಕೋರಿದ ಕೋರಿಕೆಗಳು ನೆರವೇರುವುದಕ್ಕೆ ಎಷ್ಟು ವಿಘ್ನಗಳು ಬರುವುವು !

ವೃತ್ತ || ಅಡಿಗಡಿಗಂಗುಳೀದಳಗಳಿಂದಧರೋಷ್ಠಗಳಂ ಮುಸುಂಕುತುಂ
ಚಕ್ರೆಂ ಬಿಡು ಬಿಡು ಬೇಡ ಬೇಡೆನಿಪ ನಲ್ನುಡಿಗಳ್ ಕಿವಿಗಳ್ಗೆ ಸೌಖ್ಯಮಂ |
ಕುಡೆ ಹರಿಣಾಕ್ಷಿ ತನ್ನ ಪೆಗಲತ್ತ ತಿರುಂಗಿಸಿದಾಸ್ಯಪದ್ಮಮಂ
ಪಿಡಿದತಿಕಷ್ಟದಿಂ ನೆಗಪಿಯುಂ ನೆರೆ ಚುಂಬಿಸದಾದೆನಾನದಂ || ೭೬ ||

ಇನ್ನೆಲ್ಲಿಗೆ ತಾನೇ ಹೋಗಲಿ! ಒಂದುವೇಳೆ ನನ್ನ ಪ್ರಾಣಕಾಂತೆಯಿಂದ ಉಪಭೋಗಿಸಲ್ಪಟ್ಟ ಈ ಲತಾಮಂಟಪದಲ್ಲಿಯೇ ಒಂದು ಮುಹೂರ್ತ ನಿಲ್ಲುವೆನು.

ವೃತ್ತ || ಇದು ತಾನಾಕೆ ಪೊರಳ್ದ ಪುಷ್ಪಶಯನಂ ಕಂದಿರ್ಪ ಕಂಜಾತ ಪ
ಮ ತ್ರದೆ ಸೂಕ್ಷ್ಮಾಗ್ರನಖಂಗಳಿಂ ಬರೆದನಂಗಾಲೇಖನಂ ತಾನಿದಿಂ |
ತಿದು ಹಸ್ತಾಬ್ಜದೆ ಜಾರಿದಾಕೆಯ ಮೃಣಾಳೀಕಂಕಣಂ ನೋಡಲೀ
ಸದನಂ ಶೂನ್ಯಮೆನಿಪ್ಪೊಡಂ ಪೊರಮಡಲ್ಕಾನಾರೆನೀತಾಣದಿಂ || ೭೭ ||

ತೆರೆಯಲ್ಲಿ—ಎಲೈ ಮಹಾರಾಜನೇ,

ಕಂದ || ಸಂಜೆಯು ಸವನದೆ ಶಿಖಿಯಿಂ
ರಂಜಿತಮಾಗಿರ್ಪ ಹೋಮವೇದಿಯ ಸುತ್ತಲ್ |

---

§ ರಾಗ—ಜಲಾಬ್. ಆದಿತಾಳ.

ಆಹ ನೋಡೆ ಬಹುವಿಘ್ನವತಿಗಳು | ಈಹಿತಾರ್ಥ ಸಂಸಿದ್ಧಿಗಳು ||ಪ|| ನಂಬಿಸಿ ಪ್ರಿಯೆಯು- ಮು | ಖಾಂಬುಜವನು ಚುಬು | ಕಂಬಿಡಿದೆತ್ತಿಯೂ | ಚುಂಬಿಸದಾದೆ ||೧|| ನಲ್ಲೆ ಭೋಗಿಸಿದೀ | ಬಳ್ಳಿಮಂಟಪದೊಳು | ನಿಲ್ಲುವೆನಕಟಾ ಇ | ನ್ನೆಲ್ಲಿಗೆಪೋಪೆ ||೨|| ಆ ಸತಿ ಮಲಗಿದ | ಕೌಸುಮ ಶಯನವಿ | ದೋ ಸರಿವುದು ಬಗೆ | ಬೇಸರನಹಹಾ ||೩|| ತಾವರೆಯೆಲೆಯೊಳ | ಗಾವಧು ಬರೆದಿಹ | ಭಾವಜಪತ್ರವಿ | ದೋವೋ ಬಿದ್ದಿಹುದು ||೪|| ಆರವುಣಿಯ ಕರ ವಾರಿಜದಿಂದಿದೊ | ಜಾರಿ ಬಿದ್ದಿಹ ಬಿಸ | ಚಾರು ಕಂಕಣವು ||೫|| ಬಳ್ಳಿಮಂಟಪಕೆ ತಾಂ | ಸೊಲ್ಲಿಸುವಂತಿರೆ | ವಲ್ಲಭೆ ಯೆಂದುದ | ಕೆಲ್ಲಿ ಸ್ವೈರಣೆಯು ||೬|| ಸರಸಿಜನೇತ್ರೆಯಿಂ | ವಿರಹಿತಮಾದೊಡೀ | ಯರಲಮಂಟಪದಿ ನಾಂ ಪೊರಮಡಲಾರೆ ||೭||

ಅಂಜಿಸುತಸುರಚಾಪ್ರಯಾ
ಪುಂಜಂ ಸಂಧ್ಯಾಪಯೋದಕಪಿಶಂ ಚರಿಕುಂ ‖ ೭೮ ‖

ರಾಜಂ—ಇದೊ ಬಂದೆ ಬಂದೆ.

(ಎಲ್ಲರೂ ಹೋಗುವರು)

---

ರಾಗ—ಸುರಟಿ. ರೂಪಕತಾಳ.

ರಾಜಂ—ನಾಗವೇಣಿ ನಗರಿಗೆ ನಾಂ ಪೋಗಿ ಬರುವೆನೆ ‖ ಪ ‖ ಅರಸುತನದ ಕಾರ್ಯವೆನ್ನ | ತ್ವರಿತ ಗೊಳಿಪುದು | ಹರುಷದಿಂದ ಕಳುಹಿಸು ನೀಂ ಮರುಗಲಾಗದು ‖ ೧ ‖

ಶಕುಂ—ತಡೆಯಲಾರೆ ನಿನ್ನ ನಾಂ | ಬಿಡಲು ವಾರೆನು | ಪೊಡವಿಯೊಡೆಯ ಪೋಪರೆ ಸಂ | ಗಡಲೆ ಬರುವೆನು ‖ ೨ ‖

ರಾಜಂ—ಅರಸಿ ನಿನ್ನನಗಲಿ ನಿಮಿಷ | ವಿರಲು ಬಲ್ಲೆನೆ | ಕರೆಸಿಕೊಂಬೆ ಬೇಗನೆ ನಾಂ | ಸರಸಿಜಾನನೆ ‖ ೩ ‖

ಶಕುಂ—ಇಂತು ಪೇಳಿ ಪೋಗಿ ಸೇರ | ಲಂತಪುರವನು | ಅಂತರಂಗವೆಂತಹುದೊ | ಕಾಂತ ಕಾಣೆನು ‖ ೪ ‖

ರಾಜಂ—ಕಂದ ‖ ಅನುದಿನವೊಂದೊಂದಾಗೆಲೆ | ವನಿತಾಮಣಿಯೆಣಿಪುದೆನ್ನ ನಾಮಾಕ್ಷರವಂ |
ಕೊನೆಮುಟ್ಟುವನಿತರೊಳ್ ನಿ | ನ್ನನು ಕರೆಯಿಪೆನೆನ್ನ ರಾಣಿವಾಸಕೆ ನಿಜದಿಂ ‖

(ಎಂದು ಶಕುಂತಳೆಯ ಬೆರಳಿಗೆ ಉಂಗುರವನ್ನು ತೊಡಿಸುವನು.)

# ಚತುರ್ಥಾಂಕಂ

(ಅನಂತರ ಪುಷ್ಪಗಳನ್ನು ಕೊಯ್ಯುವುದನ್ನು ಅಭಿನಯಿಸುತ್ತ ಇಬ್ಬರು ಸಖಿಯರು ಬರುವರು)

ಮೊದಲನೆಯವಳು—ಎಲೆ ಪ್ರಿಯಂವದೆ, ಗಾಂಧರ್ವವಿವಾಹವಿಧಿಯಿಂದ ಮದುವೆಯಾದ ಶಕುಂತಳೆಯು, ಅನುರೂಪನಾದ ಪತಿಯನ್ನು ಸೇರಿ ಕೃತಕೃತ್ಯಳಾದಳೆಂದು ನನ್ನ ಮನಸ್ಸು ಸಂತೋಷಪಟ್ಟಿತು; ಆದರೂ ಇದೊಂದು ಚಿಂತಿಸತಕ್ಕುದಾಗಿರುವುದು.

ಪ್ರಿಯಂ—ಅದೇನು?

ಅನ—ಈಗ ಆ ರಾಜರ್ಷಿಯು ಯಾಗವನ್ನು ಮುಗಿಯಿಸಿ ಋಷಿಗಳ ಅಪ್ಪಣೆಯನ್ನು ಪಡೆದು ತನ್ನ ಪಟ್ಟಣಕ್ಕೆ ಹೋಗಿ ರಾಣೀವಾಸವನ್ನು ಸೇರಿದಮೇಲೆ ಇತ್ತಣ ವೃತ್ತಾಂತವನ್ನು ಸ್ಮರಿಸುವನೋ ಇಲ್ಲವೋ ಎಂಬುದು.

ಪ್ರಿಯಂ—ನಂಬು, ಆತನ ಆಕೃತಿವಿಶೇಷವು ಅಂಥದಾಗಿ ಕಾಣುವುದಿಲ್ಲ; ಆದರೆ ಈಗ ತಂದೆಗಳು ಈ ವೃತ್ತಾಂತವನ್ನು ಕೇಳಿ ಮನಸ್ಸಿನಲ್ಲಿ ಏನು ತಿಳಿಯುವರೋ ನಾನರಿಯೆನು.

ಅನ—ನನ್ನ ಹಾಗೆಯೇ ಅವರೂ ಅಭಿಮತಿಸುವರೆಂದು ತಿಳಿಯುವೆನು.

ಪ್ರಿಯಂ—ಅದು ಹೇಗೆ?

ಅನ—ಗುಣವಂತನಾದವನಿಗೆ ಕನ್ಯೆಯನ್ನು ಕೊಡಬೇಕೆಂಬುದು ತಂದೆಗೆ ಮುಖ್ಯ ಸಂಕಲ್ಪ; ಅದನ್ನು ದೈವವೇ ನೆರವೇರಿಸಿದರೆ ವಿಶೇಷ ಆಯಾಸವಿಲ್ಲದೆ ಗುರುಜನವು ಕೃತಾರ್ಥವಾಗಲಿಲ್ಲವೆ?

ಪ್ರಿಯಂ—(ಪುಷ್ಪದ ಪಾತ್ರೆಯನ್ನು ನೋಡಿ) ಎಲೆ ಸಖಿ, ಪೂಜೆಗೆ ಸಾಕಾದಷ್ಟು ಕುಸುಮಗಳನ್ನು ಕೊಯ್ದಾಗಲಿಲ್ಲವೆ?

ಅನ—ಎಲೆ ಸಖಿ, ಶಕುಂತಳೆಯ ಸೌಭಾಗ್ಯದೇವತೆಯು ಪೂಜಿಸತಕ್ಕುದಾಗಿರುವುದಷ್ಟೆ?

ಪ್ರಿಯಂ—ಹೌದು ಹೌದು. (ಎಂದು ಅದೇ ಕಾರ್ಯವನ್ನು ಉಪಕ್ರಮಿಸುವಳು)

ತೆರೆಯಲ್ಲಿ—ಇದೋ ನಾನು ಬಂದಿರುವೆನು!

ಅನ—(ಕೇಳಿ) ಅತಿಥಿಗಳು ಧ್ವನಿಮಾಡುವಂತಿದೆ !

ಪ್ರಿಯಂ—ಶಕುಂತಳೆ ಪರ್ಣಶಾಲೆಯಲ್ಲಿರುವಳಷ್ಟೆ! (ತನ್ನಲ್ಲಿ ತಾನು) ಇದ್ದರೇನು? ಅವಳ ಮನಸ್ಸು ಮಾತ್ರ ಅವಳಲ್ಲಿಲ್ಲ.

ಅನ—ಆಗಲಿ; ಪುಷ್ಪಗಳಿಷ್ಟೇ ಸಾಕು. (ಎಂದು ಹೊರಡುವಳು)

ತೆರೆಯಲ್ಲಿ—ಆಃ! ಅತಿಥಿತಿರಸ್ಕಾರಿಣಿಯೆ !

ಕಂದ || ನೀನಾವನ ಚಿಂತಿಸುತೆ ತ
ಪೋನಿಧಿಯಾದೆನ್ನ ಸರಿಯದಾದೆಯೊ ನಿನ್ನಂ |
ಏಸರಿಪಿದೊಡಂ ಸ್ಮರಿಸಂ
ತಾನಾತಂ ಮುನ್ನ ಗೈದುದಂ ಮರುಳಸವೋಲ್ || ೭೯ ||

ಅನ—ಹಾಹಾ! ಚಿಂತಿಸುತ್ತಿದ್ದ ಹಾಗೆಯೇ ಆಯಿತಲ್ಲಾ; ಮೈಮರೆತ ಶಕುಂತಳೆಯು, ಪೂಜ್ಯನಾದ ಯಾವನೋ ಒಬ್ಬನ ವಿಷಯದಲ್ಲಿ ಅಪರಾಧವನ್ನು ಮಾಡಿದಳು; (ಪುನಶ್ಚ ನೋಡಿ) ಯಾವನೋ ಒಬ್ಬನಲ್ಲ; ಈತನು ಸುಲಭಕೋಪನಾದ ದೂರ್ವಾಸನು! ಹಾಗೆ ಶಪಿಸಿ ತಡೆಯಲಶಕ್ಯವಾದ ಗಮನದಿಂದ ಹಿಂದಿರುಗಿದನು; ಬೆಂಕಿಗಲ್ಲದೆ ಸುಡುವ ಶಕ್ತಿಯು ಇನ್ನಾರಿಗುಂಟು? ನಡೆ, ಪಾದಗಳಿಗೆ ನಮಸ್ಕರಿಸಿ ಆತನನ್ನು ಹಿಂದಿರುಗಿಸು; ಅಷ್ಟರಲ್ಲೆ ಅರ್ಘ್ಯೋದಕವನ್ನು ತೆಗೆದುಕೊಂಡು ಬರುವೆನು.

ಪ್ರಿಯಂ—ಹಾಗಾಗಲಿ. (ಎಂದು ಹೋಗುವಳು)

ಅನ—(ಎರಡು ಹಜ್ಜೆ ನಡೆದು ಎಡವಿದಂತೆ ಅಭಿನಯಿಸಿ) ಅಯ್ಯೋ! ಅವಸರದಿಂದ ಹೋಗುತ್ತಾ ಎಡವಿ ಪುಷ್ಪಪಾತ್ರೆಯನ್ನು ಕೆಡಹಿದೆನಲ್ಲಾ! (ಎಂದು ಪುಷ್ಪಗಳನ್ನು ಆರಿಸುವಂತೆ ಅಭಿನಯಿಸುವಳು)

ಪ್ರಿಯಂ—ಎಲೆ ಸಖಿ, ದೂರ್ವಾಸನು ಸ್ವಭಾವದಿಂದ ವಕ್ರನಾದವನು; ಯಾರು ಹೇಳಿದ ವಿನಯವನ್ನು ತಾನೇ ಪರಿಗ್ರಹಿಸುವನು? ಆದರೂ ಅವನನ್ನು ಸ್ವಲ್ಪ ದಯಾರ್ದ್ರನನ್ನು ಮಾಡಿದೆನು.

ಅನ—(ನಸುನಕ್ಕು) ಆತನಲ್ಲಿ ಇಷ್ಟಾದುದೇ ಹೆಚ್ಚು; ಹೇಳು ಹೇಳು.

ಪ್ರಿಯಂ—ಎಷ್ಟು ನಾನು ಒಡಂಬಡಿಸಿದರೂ ಹಿಂದಿರುಗಲಿಲ್ಲ; ಆಗ ಹೀಗೆ ಬೇಡಿಕೊಂಡೆನು.

ಅನ—ಹೇಗೆ? ಹೇಳು.

ಪ್ರಿಯಂ—ಪೂಜ್ಯರೆ, ತಮ್ಮ ತಪಃಪ್ರಭಾವವನ್ನು ತಿಳಿಯದ ಪುತ್ರಿಯ ಇದೊಂದು ಪ್ರಥಮಾಪರಾಧವನ್ನು ಕ್ಷಮಿಸಬೇಕು—ಎಂದು.

ಅನ—ಆಮೇಲೆ ಆಮೇಲೆ?

ಪ್ರಿಯಂ—ಅನಂತರ ಅವರು "ನಮ್ಮ ವಚನವು ತಪ್ಪತಕ್ಕುದಲ್ಲ; ಆದರೆ ಅಭಿಜ್ಞಾನಾಭರಣದರ್ಶನದಿಂದ ಶಾಪವಿಮೋಚನೆಯಾಗುವುದು" ಎಂದು ಹೇಳಿ ಕೂಡಲೇ ಮಾಯವಾದರು.

ಅನ—ಈಗ ನೆಮ್ಮದಿಯಾಯಿತು. ಆ ರಾಜರ್ಷಿಯು ಪಟ್ಟಣಕ್ಕೆ ಹೊರಡುವಾಗ ತನ್ನ ನಾಮಾಂಕಿತವಾದ ಮುದ್ರಿಕೆಯನ್ನು ಸ್ಮರಣೆಯನ್ನುಂಟುಮಾಡತಕ್ಕುದೆಂದು ತಾನೇ ಶಕುಂತಳೆಯ ಬೆರಳಿಗಿಟ್ಟು ಹೋದನು. ಅದರಿಂದ ಶಕುಂತಳೆಗೆ ಉಪಾಯವು ಸ್ವಾಧೀನವಾಗಿರುವುದು. ನಡೆ, ಇನ್ನು ದೇವಕಾರ್ಯವನ್ನು ನೆರವೇರಿಸೋಣ. (ಎಂದು ನಡೆಯುವರು)

ಪ್ರಿಯಂ—(ನೋಡಿ) ಎಲೆ ಅನಸೂಯೆ, ಎಡದ ಕೈಯಮೇಲೆ ತನ್ನ ಮುಖವನ್ನಿಟ್ಟು, ಚಿತ್ರದಲ್ಲಿ ಬರೆದ ಪ್ರತಿಮೆಯಂತಿರುವ ಪ್ರಿಯಸಖಿಯನ್ನು ನೋಡಿದೆಯಾ? ಪತಿಯ ಚಿಂತೆಯಿಂದ ತನ್ನನ್ನೇ ತಾನು ಮರೆತಿರುವಳು; ಇನ್ನು ಬಂದ ಅತಿಥಿಯನ್ನು ಹೇಗೆ ತಿಳಿದಾಳು?

ಅನ—ಪ್ರಿಯಂವದೆ, ಈ ವೃತ್ತಾಂತ ನಮ್ಮಿಬ್ಬರ ಮುಖದಲ್ಲೇ ಇರಲಿ ಕಂಡೆಯಾ; ಸ್ವಭಾವಕೋಮಲೆಯಾದ ಸಖಿಯನ್ನು ರಕ್ಷಿಸಬೇಕಲ್ಲವೆ?

ಪ್ರಿಯಂ—ಯಾರು ತಾನೇ ಮಲ್ಲಿಗೆಬಳ್ಳಿಗೆ ಬಿಸಿನೀರನ್ನೆರೆಯುವರು?

(ಎಂದು ಹೊರಟು ಹೋಗುವರು)

ಇದು ವಿಷ್ಕಂಭಂ

---

(ಅನಂತರ ಮಲಗಿದ್ದು ಎದ್ದ ಋಷಿಶಿಷ್ಯನು ಬರುವನು)

ಋಷಿಶಿಷ್ಯ—ವೇಳೆಯನ್ನು ತಿಳಿದು ಬರುವಂತೆ ಸೋಮತೀರ್ಥದಿಂದ ಬಂದ ಪೂಜ್ಯರಾದ ಕಣ್ವರಿಂದ ಆಜ್ಞಪ್ತನಾಗಿರುವೆನು; ಆದುದರಿಂದ ಹೊರಕ್ಕೆ ಹೋಗಿ ರಾತ್ರಿಯೆಷ್ಟು ಉಳಿದಿರುವುದೆಂದು ನೋಡುವೆನು. (ಎಂದು ಸ್ವಲ್ಪ ನಡೆದು ನೋಡಿ) ಓಹೋ! ಬೆಳಗಾಯಿತು! ಹಾಗೆಯೇ ಸರಿ.

ಕಂದ || ಸಸಿ ಮುಳುಗುವನೊಂದೆಡೆಯುದ
ಯಿಸುವನದೊಂದೆಡೆ ದಿನೇಶನಿವರ್ಗಳ ಯುಗಪ|
ದ್ವ್ಯಸನೋದಯಂಗಳಿವು ದುಃ
ಖಸುಖಂಗಳೊಳಿಳೆಯ ನಿಯಮಿಪಂತಿರೆ ತೋರ್ಕುಂ || ೮೦ ||

ಕಂದ || ಪೆರೆ ಮರೆಯಾದೊಡೆ ಮುನ್ನಿನ
ಸಿರಿಯುಳಿದಾನ್ಸೈದಿಲೀಯದಕ್ಷ್ಣಿಗೆ ಮುದಮಂ |
ತೆರಳಲ್ಕಿಷ್ಟರ್ ದೇಶಾಂ
ತರಕಬಲಾಜನದ ಚಿಂತೆ ದುಸ್ಸಹಮಲ್ತೇ || ೬೧ ||

(ತೆರೆಯನ್ನು ಹಾರಿಸಿಕೊಂಡು ಅನಸೂಯೆ ಪ್ರವೇಶಿಸುವಳು)

ಅನ—ಹೀಗೆ ವಿಷಯಪರಾಙ್ಮುಖವಾದ ಜನಕ್ಕೂ ಇದು ತಿಳಿಯದೇ ಬೇರೆಯಿಲ್ಲ; ಹೀಗಿರುವಲ್ಲಿ ಅಂತಪ್ಪ ರಾಜನಾದ ದುಷ್ಯಂತನೂ ನಮ್ಮ ಶಕುಂತಳೆಯ ವಿಷಯದಲ್ಲಿ ಅನ್ಯಾಯವನ್ನು ಮಾಡಿದನು.

ಯಜಮಾನ ಶಿಷ್ಯ—ಸಮೀಪಿಸಿದ ಹೋಮಕಾಲವನ್ನು ಗುರುಗಳಿಗೆ ತಿಳಿಸುವೆನು. (ಎಂದು ಹೋಗುವನು)

ಅನ—ಅಥವಾ ತಿಳಿದಾಗ್ಯೂ ನಾನೇನು ಮಾಡುವೆನು? ಮಾಡತಕ್ಕ ಕಾರ್ಯಗಳಲ್ಲಿಯೂ ನನಗೆ ಕೈಕಾಲುಗಳು ಆಡುವುದಿಲ್ಲ; ಆಃ! ಸತ್ಯಸಂಧನಲ್ಲದ ದುಷ್ಯಂತನಲ್ಲಿ ಕಪಟವನ್ನರಿಯದ ಶಕುಂತಳೆಯನ್ನು ಸೇರಿಸಿದ ಕಾಮನು ಈಗ ತನ್ನ ಇಷ್ಟಾರ್ಥವನ್ನು ಪಡೆಯಲಿ! ಒಂದು ವೇಳೆ ದೂರ್ವಾಸನ ಶಾಪವು ಹೀಗೆ ಮಾಡಿದ್ದೀತು; ಹಾಗಲ್ಲದಿದ್ದರೆ ಆ ರಾಜಋಷಿಯು ಆ ರೀತಿಯಲ್ಲಿ ಹೇಳಿ ಹೋಗಿ ಇಷ್ಟು ದಿವಸಗಳಾದಾಗ್ಯೂ ಒಂದು ಪತ್ರಿಕೆಯನ್ನಾದರೂ ಕಳುಹಿಸದಿರುವನೆ? ಆದುದರಿಂದ ಸ್ಮೃತಿಯನ್ನು ಕೊಡುವುದಕ್ಕೆ ಇಲ್ಲಿಂದ ಉಂಗುರವನ್ನು ಕಳುಹಿಸಿಕೊಡುವೆನು; ದುಃಖಶೀಲವಾದ ತಪಸ್ವಿ ಜನವನ್ನು ಯಾರುತಾನೆ ಪ್ರಾರ್ಥಿಸುವರು? ತಪ್ಪು ಸಖಿಯದಾದ್ದರಿಂದ, ಸೋಮತೀರ್ಥದಿಂದ ಬಂದ ತಂದೆಯಾದ ಕಣ್ವರಿಗೆ ದುಷ್ಯಂತನನ್ನು ವರಿಸಿ ಶಕುಂತಳೆ ಗರ್ಭಿಣಿಯಾಗಿರುವಳೆಂದು ಹೇಗೆ ತಿಳಿಸಲಿ? ತಿಳಿಸಲಾರೆ; ಹೀಗಿರುವಲ್ಲಿ ಇನ್ನು ನಾನು ಮಾಡತಕ್ಕದ್ದೇನು?

ಪ್ರಿಯಂ—(ಪ್ರವೇಶಿಸಿ ಹರ್ಷದಿಂದ) ಎಲೆ ಸಖಿ, ಏಳು ಏಳು! ಶಕುಂತಳೆಯ ಪ್ರಸ್ಥಾನ ಮಂಗಳವನ್ನು ನೆರವೇರಿಸೋಣ.

ಅನ—ಇದೇನು!

ಪ್ರಿಯಂ—ಕೇಳು; ಈಗ ನಾನು ಸುಖನಿದ್ರೆಯನ್ನು ಕೇಳುವುದಕ್ಕೆ ಶಕುಂತಳೆಯ ಸಮೀಪಕ್ಕೆ ಹೋಗಿದ್ದೆನು.

ಅನ—ಆಮೇಲಾಮೇಲೆ?

ಪ್ರಿಯಂ—ಆಗ ಲಜ್ಜೆಯಿಂದ ತಲೆಯನ್ನು ತಗ್ಗಿಸಿಕೊಂಡು ನಿಂತಿದ್ದ ಶಕುಂತಳೆಯನ್ನು ಆಲಿಂಗಿಸಿಕೊಂಡು ತಂದೆಗಳು ಹೀಗೆ ಕೊಂಡಾಡಿದರು; ಯಜಮಾನನು

ಹೊಗೆಯಿಂದ ಕಣ್ಣುಗಳನ್ನು ತೆರೆಯದಿದ್ದರೂ ಆತನ ಕೈಯಿಂದ ಆಹುತಿಯು ದೈವ ಯೋಗದಿಂದ ಅಗ್ನಿಯಲ್ಲೇ ಬಿದ್ದಿತು. ಎಲೆ ಮಗಳೆ, ಸಚ್ಛಿಷ್ಯನಿಗೆ ಕೊಟ್ಟ ವಿದ್ಯೆ ಯಂತೆ ನನಗೆ ಸಂತೋಷವನ್ನುಂಟುಮಾಡುವಳಾದೆ; ಋಷಿಯ ಪೋಷಣೆಯಲ್ಲಿದ್ದ ನಿನ್ನನ್ನು ಈಗಲೇ ನಿನ್ನ ಪತಿಯ ಸಮೀಪಕ್ಕೆ ಕಳುಹಿಸುವೆನು—ಎಂದು.

ಅನ—ತಂದೆಯಾದ ಕಣ್ವರಿಗೆ ಈ ವೃತ್ತಾಂತವನ್ನು ಸೂಚಿಸಿದವರು ಯಾರು ?

ಪ್ರಿಯಂ—ಹೋಮಶಾಲೆಯನ್ನು ಪ್ರವೇಶಿಸಿದ ತಂದೆಗೆ ಛಂದೋಮಯವಾದ ಅಶರೀರವಾಣಿಯು

ಅನ—(ಆಶ್ಚರ್ಯದಿಂದ) ಹೇಳು ಹೇಳು.

ಪ್ರಿಯಂ—ಕಂದ || ಶಾಂತಾತ್ಮ ನಿನ್ನ ಸುತೆ ದು
ಷ್ಯಂತನ ಕೈಪಿಡಿದು ಧರಿಸಿ ಗರ್ಭವನುರ್ವೀ |
ಸಂತೋಷಾರ್ಥಂ ಮೆರೆದಪ
ಳಂತಶ್ಶಿಖಿಯಾದ ಶಮಿಯವೋಲರಿಯೆನುತುಂ || ೮೨ ||

ಅನ—(ಪ್ರಿಯಂವದೆಯನ್ನು ಆಲಿಂಗಿಸಿ) ಸಖಿ, ಇದೇ ನನಗೆ ಬೇಕಾಗಿದ್ದದ್ದು. ಆದರೆ ಶಕುಂತಲೆ ಈಗಲೇ ಪತಿಗೃಹಕ್ಕೆ ಹೋಗುವಳೆಂಬ ಕಳವಳದಿಂದ ನನಗೆ ಸಾಧಾರಣವಾದ ಸಂತೋಷವುಂಟಾಗಿರುವುದು.

ಪ್ರಿಯಂ—ಎಲೆ ಸಖಿ, ನಮ್ಮ ಕಳವಳವನ್ನು ಹೇಗಾದರೂ ಪರಿಹರಿಸಿ ಕೊಳ್ಳೋಣ; ದುಃಖಿತೆಯಾದ ಶಕುಂತಳೆ ಸುಖವನ್ನು ಪಡೆದರೆ ಸಾಕು.

ಅನ—ಹಾಗಾದರೆ ಇದಕ್ಕಾಗಿ ಈ ಮಾವಿನ ಮರದ ಕೊಂಬೆಗೆ ತಗುಲಿಸಿದ ತೆಂಗಿನಗರಿಯ ಪುಟ್ಟಿಯಲ್ಲಿ ಇದುವರೆಗೂ ಕಂದದ ಹಾಗೆ ಇಟ್ಟಿದ್ದ ಕೇಸರ ಮಾಲಿಕೆ ಯನ್ನು ನಿನ್ನ ಕೈಗೆ ತೆಗೆದುಕೊ. ಅಷ್ಟರಲ್ಲಿ ನಾನೂ ಕೂಡ ಶಕುಂತಳೆಗೋಸ್ಕರ ಗೋರೋಚನ, ತೀರ್ಥಮೃತ್ತಿಕೆ, ದೂರ್ವಾಕಿಸಲಯಗಳ ಮಂಗಳಾನುಲೇಪಗಳನ್ನು ಮಾಡುವೆನು.

ಪ್ರಿಯಂ—ಹಾಗೆ ಮಾಡು.

(ಅನಸೂಯೆ ಹೊರಟು ಹೋಗುವಳು)

ಪ್ರಿಯಂ—(ಪುಷ್ಪಪಾತ್ರೆಯನ್ನು ಗ್ರಹಿಸುವಂತೆ ನಟಿಸುವಳು)

ತೆರೆಯಲ್ಲಿ—ಎಲೆ ಗೌತಮಿ, ಶಕುಂತಳೆಯನ್ನು ಕರೆದುಕೊಂಡು ಹೋಗುವುದಕ್ಕೆ ಯೋಗ್ಯರಾದ ಶಾರ್ಙ್ಗರವ ಶಾರದ್ವತರನ್ನು ನೇಮಿಸು.

ಪ್ರಿಯಂ—(ಕಿವಿಗೊಟ್ಟು) ಎಲೆ ಅನಸೂಯೆ, ಬೇಗ ಬಾ, ಹಸ್ತಿನಗರಕ್ಕೆ ಹೊರಡುವ ಋಷಿಗಳ ಸದ್ದು ಕೇಳಿಬರುವುದು.

(ಅನುಲೇಪನದ ಪಾತ್ರೆಯನ್ನು ಹಿಡಿದುಕೊಂಡು ಅನಸೂಯೆ ಪ್ರವೇಶಿಸುವಳು)

ಅನ—ಸಖಿ ಬಾ! ಬಾ! ಹೋಗೋಣ. (ಎಂದು ನಡೆಯುವರು)

ಪ್ರಿಯಂ—(ಶಕುಂತಳೆಯನ್ನು ನೋಡಿ) ಇದೊ ಸೂರ್ಯೋದಯದಲ್ಲಿ ಶಕುಂತಳೆ ಮಂಗಳಮಜ್ಜನವನ್ನು ಮಾಡಿ ನೀವಾರಾಕ್ಷತಹಸ್ತೆಯರಾಗಿ ಸ್ವಸ್ತಿಯನ್ನು ಹೇಳುವ ತಾಪಸಿಯರಿಂದ ಅಭಿನಂದಿಸಲ್ಪಡುತ್ತ ನಿಂತಿರುವಳು. ಇವಳ ಸಮೀಪಕ್ಕೆ ಹೋಗೋಣ. (ಎಂದು ಸಮೀಪಕ್ಕೆ ಬರುವರು)

(ಅನಂತರ ಪೂರ್ವೋಕ್ತ ವ್ಯಾಪಾರವುಳ್ಳ ಶಕುಂತಳೆ ಪೀಠಗತೆಯಾಗಿ ಪ್ರವೇಶಿಸುವಳು)

ಒಬ್ಬ ತಾಪಸಿ—(ಶಕುಂತಳೆಯನ್ನು ಕುರಿತು) ಮಗಳೇ, ಪತಿಯ ಬಹುಮಾನ ಸೂಚಕವಾದ ಮಹಾದೇವೀ ಶಬ್ದವನ್ನು ಹೊಂದು!

ಮತ್ತೊಬ್ಬಳು—ಎಲೆ ವತ್ಸೆ, ವೀರನಾದ ಮಗನನ್ನು ಪಡೆ!

ಇನ್ನೊಬ್ಬಳು—ಜಾತೆ, ಪತಿಗೆ ಪ್ರೀತಿಪಾತ್ರಳಾಗು! (ಹೀಗೆ ಹರಸಿ ಗೌತಮಿಯನ್ನು ಬಿಟ್ಟು ತಾಪಸಿಯರು ಹೋಗುವರು)

ಸಖಿಯರು—(ಸಮೀಪಕ್ಕೆ ಬಂದು) ಎಲೆ ಸಖಿ, ನಿನಗೆ ಸುಖಮಜ್ಜನ ಬಳೆಯಿತೆ?

ಶಕುಂ—ನನ್ನ ಪ್ರಿಯಸಖಿಯರಿಗೆ ಸುಖಾಗಮನವೆ? ಇಲ್ಲಿ ಕುಳಿತುಕೊಳ್ಳಿರಿ.

ಇಬ್ಬರೂ—(ಮಂಗಳ ಪಾತ್ರೆಗಳನ್ನು ತೆಗೆದುಕೊಂಡು ಕುಳಿತು) ಎಲೆ ಶಕುಂತಳೆ, ಸಿದ್ಧಳಾಗು. ನಿನಗೆ ನಾವು ಚೆನ್ನಾಗಿ ಮಂಗಳಾನುಲೇಪವನ್ನು ಮಾಡುವೆವು.

ಶಕುಂ—ಇದನ್ನು ವಿಶೇಷವಾಗಿ ಎಣಿಸುವೆನು; ಮುಂದಕ್ಕಿದು ನನಗೆ ದುರ್ಲಭವಾಗುವುದಲ್ಲವೆ? (ಎಂದು ಕಣ್ಣೀರನ್ನು ಮಿಡಿಯುವಳು)

ಸಖಿಯರು—ಎಲೆ ಸಖಿ, ಮಂಗಳಕಾಲದಲ್ಲಿ ನೀನಿಂತು ರೋದನಮಾಡುವುದು ಉಚಿತವಲ್ಲ.

(ಎಂದು ಕಣ್ಣೀರನ್ನು ಒರಸಿ, ಅಲಂಕರಿಸುವಂತೆ ಅಭಿನಯಿಸುವರು)

ಪ್ರಿಯಂ—ಎಲೆ ಸಖಿ, ಆಭರಣವನ್ನು ಇಟ್ಟುಕೊಳ್ಳುವುದಕ್ಕೆ ಯೋಗ್ಯವಾದ ನಿನ್ನ ರೂಪು, ಆಶ್ರಮಸುಲಭವಾದ ಅಲಂಕಾರದಿಂದ ವಿಕಾರವನ್ನು ಪಡೆಯುವುದು.

(ಅನಂತರ ಆಭರಣಾದಿಗಳನ್ನು ತೆಗೆದುಕೊಂಡು ಋಷಿಕುಮಾರರು ಬರುವರು)

ಋಷಿಕುಮಾರರು—ಇದೋ, ಅಲಂಕಾರವಸ್ತುಗಳು ; ಇವುಗಳಿಂದ ಈ ಪೂಜ್ಯೆಯನ್ನು ಅಲಂಕರಿಸಿ.

(ಎಲ್ಲರೂ ನೋಡಿ ವಿಸ್ಮಯ ಹೊಂದುವರು)

ಗೌತಮಿ—ವತ್ಸ ನಾರದನೆ, ಇದೆಲ್ಲಿಂದ ಬಂದಿತು ?

ಮೊದಲನೆಯವನು—ತಾತ ಕಣ್ವರ ಪ್ರಭಾವದಿಂದ.

ಗೌತಮಿ—ಇದೇನು ಮಾನಸ ಸೃಷ್ಟಿಯೋ ?

ಎರಡನೆಯವನು—ಅಲ್ಲ, ಕೇಳಬೇಕು ; ಪೂಜ್ಯರಾದ ಕಣ್ವರು ಶಕುಂತಳೆಯ ನಿಮಿತ್ತವಾಗಿ ವನಸ್ಪತಿಗಳಿಂದ ಪುಷ್ಪಗಳನ್ನು ಕೊಯ್ದುಕೊಂಡು ಬನ್ನಿರೆಂದು ನಮ್ಮನ್ನು ಆಜ್ಞಾಪಿಸಿದರು ; ಅನಂತರದಲ್ಲಿ ನಾವು ವನಸ್ಪತಿಗಳ ಬಳಿಗೆ ಹೋದೆವು. ಬಳಿಕ—

ಉ ಮ
ವೃತ್ತ || ಇತ್ತುದದೊಂದು ಶಾಖಿ ಶುಭಕಾಗೊಲವಿಂ ಶಶಿಪಾಂಡುವಸ್ತ್ರಮಂ
ಮತ್ತಮದೊಂದು ವೃಕ್ಷಮಿರದಿತ್ತುದು ತಾಸಡಿಯೂಡೆ ಲಾಕ್ಷೆಯಂ |
ಎತ್ತಿದ ಪಲ್ಲವಪ್ರತಿಮಪಾಣಿಗಳಿಂ ವನದೇವಿಯರ್ ಮುದಂ
ಬೆತ್ತೊಡನಿತ್ತರೀತೊಡವನೆಲ್ಲಮನಸ್ಯಕುಜಂಗಳತ್ತಣಿಂ || ೮೩ ||

ಪ್ರಿಯಂ—(ಶಕುಂತಳೆಯನ್ನು ನೋಡಿ) ಎಲೆ ಸಖಿ ಶಕುಂತಳೆ, ಇವರ ಈ ಅನುಗ್ರಹವು ನೀನು ಪತಿಗೃಹದಲ್ಲಿ ಅನುಭವಿಸತಕ್ಕ ರಾಜ್ಯಲಕ್ಷ್ಮಿಗೆ ಸೂಚಕವಾಗಿರುವುದು.

ಶಕುಂ—(ಲಜ್ಜೆಯನ್ನು ನಟಿಸುವಳು)

ಮೊದಲನೆಯವನು—ಎಲೈ ಗೌತಮನೆ, ನಡೆನಡೆ, ಸ್ನಾನಾರ್ಥವಾಗಿ ಇಳಿದ ಕಣ್ವರಿಗೆ ವನಸ್ಪತಿಗಳ ಸೇವೆಯನ್ನು ಅರಿಕೆಮಾಡೋಣ.

ಎರಡನೆಯವನು—ಹಾಗಾಗಲಿ. (ಎಂದು ಹೋಗುವರು)

ಅನ—ಎಲೆ ಸಖಿ, ನಮಗೆ ಆಭರಣಗಳನ್ನಿಟ್ಟ ಅನುಭವವಿಲ್ಲ ; ಆದರೂ ಚಿತ್ರವನ್ನು ನೋಡಿದ ಪರಿಚಯದಿಂದ ನಿನ್ನ ಅಂಗಗಳಲ್ಲಿ ಆಭರಣಗಳನ್ನಿಡುವೆವು.

ಶಕುಂ—ನಿಮ್ಮ ಜಾಣ್ಮೆಯನ್ನು ಬಲ್ಲೆನು.

ಸಖಿಯರು—(ಅಲಂಕರಿಸುವುದನ್ನು ಅಭಿನಯಿಸುವರು)

(ಅನಂತರ ಸ್ನಾನದಿಂದೆದ್ದು ಕಣ್ವರು ಪ್ರವೇಶಿಸುವರು)

ಕಣ್ವರು—*ವೃತ್ತ || ಕಳವಳವಾಂತುದೆನ್ನೆರ್ದೆ ಶಕುಂತಳೆ ಪೋದಪಳೆಂದು ಕಂಠಮು
ಮ್ಮಳಿಸುವುದೊತ್ತುವಶ್ರುಭರದಿಂ ಜಡವಾದುದು ದೃಷ್ಟಿ
ಚಿಂತೆಯಿಂ |
ದಳಲಿಸಿತಾಗೆ ಕಾಡ ಮನುಜಂಗೆನಗಂ ಕಡುನೇಹದಿಂದಮಿ
ನ್ನಳಿದ ಗೃಹಸ್ಥರಾತ್ಮಭವೆಯಂ ಕಳುಪುತ್ತಕಟೆಂತಳಲ್ವರೋ ||

(ಎಂದು ಬರುವರು)

ಸಖಿಯರು—ಎಲೆ ಶಕುಂತಳೆ, ಅಲಂಕಾರವೆಲ್ಲ ನೆರವೇರಿತು ; ಇನ್ನು ದುಕೂಲ ದ್ವಯವನ್ನು ಧರಿಸಿಕೊ.

(ಶಕುಂತಳೆ ಎದ್ದು ಧರಿಸಿಕೊಳ್ಳುವಳು)

ಗೌತಮಿ—ಎಲೆ ಮಗಳೆ, ಇದೋ ತಂದೆಗಳಾದ ಕಣ್ವರು ಆನಂದಬಾಷ್ಪ ಪ್ರವಾಹದಿಂದ ತುಂಬಿದ ಕಣ್ಣುಗಳಿಂದ ಆಲಿಂಗಿಸಿಕೊಳ್ಳುವಂತೆ ನಿನ್ನನ್ನು ನೋಡುತ್ತ ಸಮೀಪದಲ್ಲಿ ನಿಂತಿರುವರು. ಇವರಿಗೆ ನಮಸ್ಕರಿಸು.

ಶಕುಂ—(ಭಕ್ತಿಪೂರ್ವಕವಾಗಿ) ತಂದೆಯೇ, ವಂದಿಸುವೆನು.

ಕಣ್ವರು—ಕಂದ || ಜಾತೆ ನಿಜಗುಣಗಳಿಂದೆ ಯ
ಯಾತಿಗೆ ಶರ್ಮಿಷ್ಠೆಯಂತೆ ಪತಿಹಿತೆಯಾಗು |
ತ್ತಾತರುಣಿ ಪೂರುವಂ ಪಡೆ
ದಾತೆರದಿಂ ಚಕ್ರವರ್ತಿಪುತ್ರನ ಪಡೆ ನೀಂ || ೮೫ ||

ಗೌತಮಿ—ಪೂಜ್ಯರೇ, ಇವು ವರಗಳಲ್ಲದೆ ಕೇವಲ ಆಶೀರ್ವಾದಗಳಲ್ಲ.

ಕಣ್ವರು—ವತ್ಸೆ, ಇತ್ತ ಬಾ ; ಈಗಲೇ ಹವಿಸ್ಸನ್ನು ಕೈಕೊಂಡಿರುವ ಅಗ್ನಿಗಳನ್ನು ಪ್ರದಕ್ಷಿಣೆಮಾಡು. (ಎಲ್ಲರೂ ಬರುವರು)

ಕಣ್ವರು—(ಋಕ್ಛಂದಸ್ಸಿನಿಂದ ಹರಸುವರು) ಎಲೆ ವತ್ಸೆ—

ಕಂದ || ವೇದಿಯ ಸುತ್ತಲ್ ನೆಲೆಗೊಂ
ಡಾದಂ ಸಮಿಧೆಗಳನಾಂತು ಪೊಣ್ಮುವ ಹವ್ಯಾ |

---

* ರಾಗ—ಭೈರವಿ. ರೂಪಕತಾಳ.

**ಎಂತು ಕಳುಹುವೇ ಸುತೆಯ | ನೆಂತು ಕಳುಹುವೇ | ಚಿಂತೆ ಚಿತ್ತಕೆ | ಪಿರಿದು ಕಾಂತ ಸದ್ಮಕೆ || ೧ || ತಡೆದ ದುಃಖದೆ ನುಡಿಯು | ತಡಬಡಿಸುತಿದೆ || ಇಡಿದ ಬಾಷ್ಪ ಕ | ಣ್ಣಡೆಯ ತುಂಬಿದೆ || ೨ || ಅಹಹ ಮುನಿಗಳಾದೆಮಗು | ದುಃಖವಿಂತಿರೆ || ಗೃಹಿಗಳಣುಗಿಯ ಕಳುಹಿ | ಸಹಿಸಬಲ್ಲರೆ || ೩ ||**

ಮೋದದಿನಘಪರಿಹಾರಕ
ಮಾದೀ ವೈತಾನವಹ್ನಿ ಸಲಹುಗೆ ನಿನ್ನಂ || ೮೬ ||

ಇನ್ನು ಪ್ರಯಾಣಮಾಡು. (ಕಣ್ಣಿನ ಸನ್ನೆಯಿಂದ) ಎಲ್ಲಿ ಶಾಙ್ಗ್ರರವ ಶಾರದ್ವತರು?

(ಶಿಷ್ಯರು ಬರುವರು)

ಶಿಷ್ಯರು—ಪೂಜ್ಯರೇ, ಇದೋ ಸಿದ್ಧರಾಗಿರುವೆವು.

ಕಣ್ವರು—ಎಲೈ ಶಾಙ್ಗ್ರರವನೇ, ನಿನ್ನ ಸಹೋದರಿಗೆ ಮಾರ್ಗವನ್ನು ತೋರಿಸು.

ಶಾಙ್ಗ್ರರವ—ಎಲೌ ಪೂಜ್ಯಳೇ, ಹೀಗೆ ಬರತಕ್ಕದ್ದು.

(ಶಕುಂತಳೆ ಆ ಮಾರ್ಗವಾಗಿ ಹೋಗುವಳು)

*ಕಣ್ವರು—ಎಲೆ ಎಲೆ, ಸನ್ನಿಹಿತದೇವತೆಗಳಾದ ತಪೋವನ ತರುಗಳಿರಾ, ಕೇಳಿರಿ:

ವೃತ್ತ || ಜಲವನದಾವಳೀಂಟಳೆರೆದಲ್ಲದೆ ನಿಮ್ಮಯ ಪಾತೆಗಂಬುವಂ
೮೭ ತಳಿರ್ಗಳ ಕೊಯ್ಯಳಾವಳೊಲವಿಂ ಮಿಗೆ ಸಿಂಗರದಾಸೆಯುಳ್ಳೊಡಂ |
ಅಲರ್ಗಳ ತಾಳೆ ನೀವು ಮೊದಲುತ್ಸವವಾಂತಪಳಾವಳಾಶಕುಂ
ತಳೆ ಪತಿಸದ್ಮಕೈದಿದಪಳಾಕೆಗನುಜ್ಞೆಯನೀವುದೆಲ್ಲರುಂ ||

(ಕೋಕಿಲಧ್ವನಿಯನ್ನು ತೋರಿಸಿ)

ಕಂದ || ಬಾಲೆ ಪತಿಗೃಹಕೆ ಪೋಪುದ
ಪೇಳಲ್ ವನವಾಸಬಂಧುವೀ ತರುವೃಂದಂ |
ಕೇಳುತನುಮತಿಸಿ ಕಲಕಂ
ಠಾಲಾಪದ ನೆವದೆ ನುಡಿವುದಿದೊ ಪಡಿಮಾತಂ || ೮೮ ||

(ಆಕಾಶದಲ್ಲಿ)

ವೃತ್ತ || ತಾವರೆ ತೀವಿ ತೋರುವ ಸರೋವರದಿಂ ರಮಣೀಯವಾಗಿ ತ
೮೯ ಳ್ತಾವರಿಸಿರ್ದ ಸಾಲ್ಮರಗಳಿಂದೆ ಹೃತಾತಪತಾಪಮಾಗಿ ರಾ |
ಜೀವಗಳದ್ರಜೋಮೃದುಲರೇಣುಗಳಿಂದತಿಸಾಂದ್ರಮಾಗಿ ಸೌ
ಖ್ಯಾವಹವಾಕೆಗಕ್ಕೆಯನುಕೂಲಸಮೀರಣಮಾಗಿ ಮೇಣ್ ಪಥಂ ||

(ಎಲ್ಲರೂ ವಿಸ್ಮಯಬಟ್ಟು ಕೇಳುವರು)

---

* ರಾಗ—ಕಮಾಚ್. ಆದಿತಾಳ.

ನಂದನೆ ಪತಿ | ಮಂದಿರಕೆ ಪೋಪಳು || ಪ || ನೀವೀಂಟದಿರೆ ನೀರ | ನೇವೇಳ್ವಿನಂಬುವ | ಸೇವಿಸದಿಹಳಾವ | ಳಾ ನಂದನೆ || ೧ || ಬಗೆಗೆ ಸಿಂಗರದಾಸೆ | ಯೊಗೆದೊಡಂ ನಿಮ್ಮಯ | ಚಿಗುರ ಮುರಿಯಳಾವ | ಳಾ ನಂದನೆ || ೨ || ಉದಿಸೆ ನಿಮ್ಮೊಳು ಪುಷ್ಪ | ವೊದಲು ಮನೋಹರ್ಷ | ವೊದಗುವದಾವಳೆ | ಗಾ ನಂದನೆ || ೩ ||

ಗೌತಮಿ—ಎಲೆ ಮಗಳೆ, ಪ್ರಿಯಬಂಧುಗಳಂತಿರುವ ಈ ತಪೋವನ ದೇವತೆಗಳು ಅನುಜ್ಞೆಯನ್ನು ಕೊಟ್ಟರು. ಇನ್ನು ಇವರಿಗೆ ನಮಸ್ಕರಿಸಿ ನಡೆ.

(ಶಕುಂತಳೆ ನಮಸ್ಕರಿಸಿ ಹೋಗುತ್ತಾ)

ಶಕುಂ—ಎಲೆ ಪ್ರಿಯಂವದೆ, ಪತಿಯನ್ನು ನೋಡುವ ಕುತೂಹಲ ನನಗೆ ಬಹಳವಾಗಿದ್ದಾಗ್ಯೂ ಆಶ್ರಮವನ್ನು ಬಿಟ್ಟುಹೋಗುವ ನನ್ನ ಕಾಲುಗಳು ಅತಿ ಕಷ್ಟದಿಂದ ಮುಂದಕ್ಕೆ ಸಾಗುವುವು.

ಪ್ರಿಯಂ—ಎಲೆ ಸಖಿ, ತಪೋವನವನ್ನು ಬಿಟ್ಟು ಹೋಗಲಾರದ ದುಃಖ ನಿನ್ನೊಬ್ಬಳಿಗೇ ಅಲ್ಲ. ನಿನ್ನ ವಿಯೋಗದಿಂದ ತಪೋವನಕ್ಕಾದ ಅವಸ್ಥೆಯನ್ನು ನೋಡು.

ಕಂದ || ಕುಣಿವುದನುಳಿದುವು ಶಿಖಿಗಳ್
ತೃಣಕಬಳಂ ಜಗುಳೆ ಬಾಯಿನರಿಯದು ಹರಿಣೀ |
ಗಣಮುದಿರ್ದೆಲೆಯಿಂ ರಮಣೀ
ಮಣಿ ಕಣ್ಣೀರ್ವಿಡುವ ತೆರದೆ ತೋರ್ಪುವು ಲತೆಗಳ್ || ೯೦ ||

ಶಕುಂ—(ಸ್ಮರಿಸಿಕೊಂಡು) ತಂದೆಯೆ, ಲತಾಭಗಿನಿಯಾದ ವನಜ್ಯೋತ್ಸ್ನೆಗೆ ಹೇಳಿಬರುವೆನು.

ಕಣ್ವರು—ಬಲ್ಲೆನು; ನಿನಗದರಲ್ಲಿ ಒಡಹುಟ್ಟಿದ ಸ್ನೇಹವಿರುವುದಷ್ಟೆ. ಇದೋ ಬಲಗಡೆ ಇರುವುದು.

ಶಕುಂ—(ಲತೆಯ ಬಳಿಗೆ ಬಂದು) ಎಲೆ ವನಜ್ಯೋತ್ಸ್ನೆಯೆ, ಸಹಕಾರ ಸಂಗತೆಯಾಗಿದ್ದಾಗ್ಯೂ ಈ ಕಡೆಯ ಶಾಖಾಭುಜಗಳಿಂದ ನನ್ನನ್ನು ಆಲಿಂಗಿಸು; ಇನ್ನು ಮೇಲೆ ನಿನಗೆ ನಾನು ದೂರಗತೆಯಾಗುವೆನಲ್ಲವೆ?

ಕಣ್ವರು—ಕಂದ || ನಂದನೆ ನಾಂ ಸಂಕಲ್ಪಿಸಿ
ದಂದದೊಳನುರೂಪಪತಿಯ ಸೇರಿದೆ ನೀಂ ಸೈ |
ಪಿಂದೀಮಾಲತಿಯುಂ ಮಾ
ಕಂದವನೊಂದಿತ್ತು ನಿಮ್ಮೊಳಾಂ ನಿಶ್ಚಿಂತಂ || ೯೧ ||

ಇತ್ತಲೀ ಮಾರ್ಗವಾಗಿ ನಡೆ.

ಶಕುಂ—ಎಲೌ ಸಖಿಯರೆ, ಈ ವನಜ್ಯೋತ್ಸ್ನೆಯನ್ನು ನಿಮ್ಮಿಬ್ಬರ ಕಯ್ಗೆ ಕೊಟ್ಟಿರುವೆನು.

ಸಖಿಯರು—ಇದನ್ನಂತೂ ನಮ್ಮ ಕಯ್ಗೆ ಕೊಟ್ಟೆ; ನಮ್ಮನ್ನು ನೀನು ಈಗ ಯಾರ ಕೈಗೆ ಕೊಟ್ಟೆ? (ಎಂದು ಕಣ್ಣೀರನ್ನು ಮಿಡಿಯುವರು)

ಕಣ್ವರು—ಎಲೆ ಅನಸೂಯೆ, ಎಲೆ ಪ್ರಿಯಂವದೆ, ಇದೇನು! ನೀವೇ ಹೀಗೆ ರೋದಿಸುವುದಕ್ಕೆ ಉಪಕ್ರಮಿಸಿದರೆ ಇನ್ನು ಶಕುಂತಳೆಯನ್ನು ಸಮಾಧಾನ ಪಡಿಸುವರು ಯಾರು? ಸಾಕು; ಸುಮ್ಮನಿರಿ.

(ಎಲ್ಲರೂ ನಡೆಯುವರು)

ಶಕುಂ—ಎಲೈ ತಂದೆಯೆ, ಪರ್ಣಶಾಲೆಯ ಬಳಿ ತಿರುಗುವ ಪೂರ್ಣಗರ್ಭಿಣಿಯಾದೀ ಹುಲ್ಲೆಗೆ ಯಾವಾಗ ಸುಖಪ್ರಸವವಾಗುವುದೋ ಆಗ ನನಗೆ ಕುಶಲ ಪತ್ರಿಕೆಯನ್ನು ಕಳುಹಿಸಬೇಕು.

ಕಣ್ವರು—ಆಗಲಿ; ಇದನ್ನು ಮರೆಯದಿರುವೆವು.

ಶಕುಂ—(ಗಮನಭಂಗವನ್ನು ಅಭಿನಯಿಸಿ) ಇದು ಯಾವುದು? ಮರಳಿ ಮರಳಿ ನನ್ನ ಸೀರೆಯ ಸೆರಗನ್ನು ಹಿಡಿದು ಸೆಳೆಯುವುದು? (ಎಂದು ಹಿಂತಿರುಗುವಳು)

ಕಣ್ವರು—ಕಂದ || ಮಗಳೆ ಕುಶಸೂಚಿ ತಾಗಿದ
ಮೊಗದೊಳ್ ವ್ರಣಹರಣತೈಲವೆರೆಯುತೆ ನೀವಾ |
ರಗಳ ಹಿಡಿಯಿತ್ತು ಪೊರೆದೀ
ಮೃಗಾರ್ಭಕಂ ನಿನ್ನ ಮಾರ್ಗಮಂ ಬಿಟ್ಟಪುದೇ? || ೯೨ ||

ಶಕುಂ—ಎಲೆ ವತ್ಸ, ಸಹವಾಸವನ್ನು ಬಿಟ್ಟು ಹೋಗುವ ನನ್ನನ್ನು ಏತಕ್ಕೆ ಅನುಸರಿಸುವೆ? ಹುಟ್ಟಿದಕೂಡಲೆ ತಾಯನಗಲಿದ ನಿನ್ನನ್ನು ಬೆಳಸಿದೆನು; ಈಗಲೂ ನನ್ನನ್ನು ಅಗಲಿದ ನಿನ್ನ ಪೋಷಣೆಯ ವಿಷಯದಲ್ಲಿ ತಂದೆಗಳು ಚಿಂತಿಸುವರು; ಇನ್ನು ಹಿಂದಿರುಗಿಹೋಗು. (ಎಂದು ರೋದಿಸುತ್ತಾ ಹೋಗುವಳು)

ಕಣ್ವರು—ಕಂದ || ತಡೆ ಮಗಳೆ ಬರ್ಪ ಕಂಬನಿ
ಗಡಣವನೆನ್ನಾಣೆ ಕಾಣದಿರ್ಪೀ ನೆಲದೊಳ್ |
ನಡೆದೊಡೆ ನಿಮ್ನೋನ್ನತಮಾ
ದೆಡೆಯೊಳ್ ಪಲ್ಲಟಿಪುವಲ್ತೆ ನಿನ್ನ ಪದಂಗಳ್ || ೯೩ ||

ಶಾರ್ಙ್ಗರವಂ—ಪೂಜ್ಯರೆ, ಬಂಧುಜನಗಳು ಜಲಾಶಯದವರೆಗೆ ಸಂಗಡ ಬರತಕ್ಕುದೆಂಬುದು ಸಂಪ್ರದಾಯವಲ್ಲವೆ? ಆದುದರಿಂದ, ಇದೋ ಸರೋವರತೀರವು; ಇಲ್ಲಿ ನಮಗೆ ಆಜ್ಞಾಪಿಸುವುದನ್ನು ಆಜ್ಞಾಪಿಸಿ ಹಿಂದಕ್ಕೆ ದಯಮಾಡಬೇಕು.

ಕಣ್ವರು—ಆದರೆ ಈ ಕ್ಷೀರವೃಕ್ಷದ ನೆರಳಲ್ಲಿ ಕುಳಿತುಕೊಳ್ಳೋಣ ಬನ್ನಿ.

(ಎಲ್ಲರೂ ಬಂದು ಕುಳಿತುಕೊಳ್ಳುವರು)

ಕಣ್ವರು—(ತಮ್ಮಲ್ಲಿ ತಾವು) ಪೂಜ್ಯನಾದ ಆ ದುಷ್ಯಂತನ ಯೋಗ್ಯತಾನುಸಾರವಾಗಿ ಏನು ಹೇಳಿಕಳುಹಿಸೋಣ? (ಎಂದು ಚಿಂತಿಸುವರು)

ಶಕುಂ—(ಮರೆಯಲ್ಲಿ) ಎಲೆ ಅನಸೂಯೆ, ಇದೋ ನೋಡು; ತಾವರೆಯಲ್ಲಿ ಮರೆಯಾದ ಮಾತ್ರಕ್ಕೇ ತನ್ನ ಸಹಚರನನ್ನು ಕಾಣದೆ ಈ ಚಕ್ರವಾಕಸ್ತ್ರೀಯು ಕಳವಳಗೊಂಡು ಎಷ್ಟು ಕೂಗಿಕೊಳ್ಳುವುದು! ನಾನಲ್ಲವೆ ಅತಿದುಷ್ಕರವಾದುದನ್ನು ಮಾಡುವಳು!

ಅನ—ಎಲೆ ಸಖಿ, ಹೀಗೆ ನೀನು ಆಲೋಚಿಸಬೇಡ.

ಕಂದ || ಉಳಿದಿನಿಯನನಿದುವುಂ ಮನ
ದಳಲಿಂ ಪಿರಿದೆನಿಸಿದಿರುಳ ಕಳೆವುದು ಬಲು ವೆ।
ಗ್ಗಳಿಸಿದ ವಿರಹವ್ಯಥೆಯಂ
ಕಳದಿಯೆ ಸಹಿಪಂತೆ ಮಾಳ್ಕುದಾಶಾಬಂಧಂ || ೯೪ ||

ಕಣ್ವರು—ಎಲೈ ಶಾರ್ಙ್ಗರವನೆ, ಶಕುಂತಳೆಯ ಇದಿರಿನಲ್ಲಿ ಆ ರಾಜನನ್ನು ಕುರಿತು, ನಾನು ಹೇಳಿದೆನೆಂದು ಹೇಳತಕ್ಕುದು:

ಶಾರ್ಙ್ಗರವಂ—ಪೂಜ್ಯರೇ, ಆಜ್ಞಾಪಿಸಬೇಕು.

ಕಣ್ವರು—ವೃತ್ತ|| ಪಿರಿದುಂ ಚಿಂತಿಸಿ ಸಂಯಮಾರ್ಥರೆನಿಪೆಮ್ಮಂ ಮೇಣ್ ಭ-ವದ್ವಂಶದೆ
ತ್ತರಮಂ ನಿನ್ನೊಳಗೀಕೆ ತಾನೆಯೊಲವೆತ್ತಾಪಾಂಗುಮಂ ಪೆಂಡಿರೊಳ್ |
ನೆರಿಗಂಡೀಕೆಯ ನೀಂ ಬರ್ದುಂಕಿಪುದು ಭಾಗ್ಯಾಧೀನಮಿನ್ನಿಂತರಿಂ
ಪೆರತೆಲ್ಲಂ ಬಗೆಯಲ್ಕದಂ ನುಡಿವುದಲ್ಲಂ ದಲ್ ವಧೂಬಂಧುಗಳ್ || ೯೫ ||

ಶಾರ್ಙ್ಗರವಂ—ಅಪ್ಪಣೆಯಾದುದನ್ನು ಗ್ರಹಿಸಿದೆನು.

ಕಣ್ವರು—ವತ್ಸೆ, ಈಗ ನಿನಗೆ ಬುದ್ಧಿವಾದವನ್ನು ಹೇಳಬೇಕಾಗಿರುವುದು. ಕೇಳು: ನಾವು ವನವಾಸಿಗಳಾದರೂ ಲೋಕತಂತ್ರವನ್ನೆಲ್ಲಾ ಬಲ್ಲೆವು.

ಶಾರ್ಙ್ಗರವಂ—ಬುದ್ಧಿಶಾಲಿಗಳಿಗೆ ಯಾವುದು ತಾನೆ ಅಗೋಚರವಾಗಿ ಇದ್ದೀತು?

ಕಣ್ವರು—ಎಲೆ ಮಗಳೆ, ಇನ್ನು ನೀನು ಗಂಡನ ಮನೆಯನ್ನು ಸೇರಿ,

*ವೃತ್ತ || ಪಿರಿಯರ ಸೇವೆಗೆಯ್ ಸವತಿಯರ್ಕಳೊಳಿಷ್ಟವಯಸ್ಯೆಯಂದದಿಂ
ದಿರು ಪತಿಯೊರ್ಮೆ ಹೇವಗೊಳಿಸಲ್ ಮುಳಿಸಿಂ ಪ್ರತಿಕೂಲೆಯಾಗದಿರ್ |

---

*ರಾಗ—ಕಾನಡ. ಆದಿತಾಳ.

**ಆಲಿಸು ಕುವರಿ| ಪೇಳುವುದ ನೀನಾಲಿಸು ಕುವರೀ ||ಪ|| ಗುರುಜನಗಳನು| ಭಕ್ತಿಯೊಳುಪ| ಚರಿಪುದು ನೀನು|| ಹರುಸದಿ ಸವತಿಯಾ| ದರೊಳಾಪ್ತಸಖಿಯಳ| ಪರಿಯಿಂದ ವರ್ತಿಸು| ತಿರು ಗುಣವತಿಯೆ ನೀ|| ನಾಲಿಸು||೧|| ಒಮ್ಮೆ ನಿನ್ನೊಳಗೆ| ಪತಿಯು ಬಗೆ| ದುಮ್ಮಾ**

ಪರಿಜನವಂ ಕರಂ ಸಲಹು ಭಾಗ್ಯದೆ ಬಾಗಿರು ಪೆಣ್ಗಳಿಂತಿರಲ್
ಗರತಿಯರಪ್ಪರಿಂತಿರದರಸ್ವಯಕಾಧಿಯರುಂಟುಮಾಳ್ಪರೌ || ೯೭ ||

ಇದು ಹೊರತು ಗೌತಮಿ ಇನ್ನೇನು ತಿಳಿದಿರುವಳೊ ಕೇಳು.

ಗೌತಮಿ—ವಧೂಜನಕ್ಕೆ ಹೇಳತಕ್ಕ ಉಪದೇಶವು ಇಷ್ಟುತಾನೆ; ಇದರ ಮೇಲೇನಿರುವುದು ? ಎಲೆ ವತ್ಸೆ, ಇದನ್ನೆಲ್ಲಾ ಗ್ರಹಿಸಿಕೊಂಡಿರು ಕಂಡೆಯಾ ?

ಕಣ್ವರು—ಎಲೆ ವತ್ಸೆ, ನನ್ನನ್ನೂ ನಿನ್ನ ಸಖೀಜನರನ್ನೂ ಆಲಿಂಗಿಸು.

ಶಕುಂ—ತಂದೆಯೆ, ಪ್ರಿಯಂವದೆ ಮೊದಲಾದ ಸಖಿಯರು ಇಲ್ಲಿಂದಲೇ ಹಿಂದಿರುಗುವರೆ ?

ಕಣ್ವರು—ಎಲೆ ಮಗಳೆ, ಇವರು ಮದುವೆಯಾಗತಕ್ಕವರು. ಆದುದರಿಂದ ಇವರು ಅಲ್ಲಿಗೆ ಬರುವುದು ಯುಕ್ತವಲ್ಲ; ನಿನ್ನೊಡನೆ ಗೌತಮಿ ಬರುವಳು.

ಶಕುಂ—(ತಂದೆಯನ್ನು ಆಲಿಂಗಿಸಿಕೊಂಡು) ಈಗ ತಂದೆಯ ತೊಡೆಯನ್ನು ಬಿಟ್ಟು ಮಲಯಪರ್ವತದ ತಟದಿಂದ ಕಿತ್ತುಹಾಕಿದ ಚಂದನಲತೆಯಂತೆ ದೇಶಾಂತರದಲ್ಲಿ ನಾನೆಂತು ಜೀವವನ್ನು ಧರಿಸುವೆನು ?

ಕಣ್ವರು—ಎಲೆ ಮಗಳೆ, ಹೀಗೇತಕ್ಕೆ ಕಳವಳಪಡುವೆ ?

ವೃತ್ತ || ಕುವರಿ ಕುಲೀನನಾದ ಪತಿಗೊಪ್ಪುವ ಪಟ್ಟದ ರಾಣಿಯಾಗಿ ವೈ
೨೭೮ ಭವಗಳಿನೇಳ್ಗೆವೆತ್ತಿನನ ಕೃತ್ಯದೊಳಾಕುಲೆಯಾಗುತಾವಗಂ |
ರವಿಯನಮರ್ತ್ಯನಾಥದಿಶೆ ತಾಂ ಪಡೆವಂತೆ ಸುಗಾತ್ರಪುತ್ರನಂ
ತವಕದೆ ಪೆತ್ತು ನೀನೆಣಿಸದಿರ್ಪೆ ಮದೀಯವಿಯೋಗದುಃಖಮಂ || ೯೭ ||

(ಶಕುಂತಲೆಯು ತಂದೆಯ ಪಾದಗಳಿಗೆ ನಮಸ್ಕರಿಸುವಳು)

ಕಣ್ವರು—ನಿನ್ನ ಕೋರಿಕೆ ಸಿದ್ಧಿಸಲಿ.

ಶಕುಂ—(ಸಖಿಯರ ಸಮೀಪಕ್ಕೆ ಬಂದು) ಎಲೌ ಸಖಿಯರೆ, ನೀವಿಬ್ಬರೂ ನನ್ನನ್ನು ಸಮವಾಗಿ ಆಲಿಂಗಿಸಿರಿ.

ಸಖಿಯರು—(ಹಾಗೆಯೇ ಆಲಿಂಗಿಸಿಕೊಂಡು) ಎಲೆ ಸಖಿ, ಆ ರಾಜನು ನಿನ್ನನ್ನು ಮರೆತಿದ್ದುದೇ ಆದರೆ ಆಗ ಆತನಿಗೆ ಅವನ ನಾಮಾಂಕಿತವಾದ ಈ ಉಂಗುರವನ್ನು ತೋರಿಸು.

---

ನವಾಗೆ || ಸಮ್ಮತಿಸುತ ಮೊದಲ | ಸುಮ್ಮಾನವಳಿಯದೆ | ಸುಮ್ಮನಿಹುದು ಗುಣ | ವಮ್ಮ ಕುಲವಧುಗಿದ || ನಾಲಿಸು || ೨ || ಪೊರೆ ಪರಿಜನವ | ಬಾಗಿಸಿ ನಡೆ | ಸಿರಿಯೊಳು ಸಿರವ || ಧರೆಯೊಳಗಿಂತು ಸ | ಚ್ಚರಿತವುಳ್ಳಸಿಯರೆ ಗರತಿಯರುಳಿದ ಸ್ತ್ರೀ | ಯರೆ ಕುಲಕಾಧಿಗಳಾಲಿಸು || ೩ ||

ಶಕುಂ—ಎಲೌ ಸಖಿಯರೆ, ನಿಮ್ಮಿ ಸಂದೇಹದಿಂದ ಕಂಪಿತೆಯಾದೆನು.

ಸಖಿಯರು—ಅಂಜಬೇಡ ; ಅತಿಸ್ನೇಹವು ಪಾಪಶಂಕಿಯಾದದ್ದು.

ಶಾರ್ಙ್ಗರವಂ—ಎಲೌ ಪೂಜ್ಯಳೆ, ಸೂರ್ಯನಾದರೆ ನೊಗದ ಮಧ್ಯಕ್ಕೆ ಹತ್ತಿದನು, ಬೇಗ ನಡೆ.

ಶಕುಂ—(ಆಶ್ರಮಕ್ಕೆ ಇದಿರಾಗಿ ನಿಂತು) ತಂದೆಯೆ, ತಪೋವನವನ್ನು ಇನ್ನು ಯಾವಾಗ ನೋಡುವೆನು ?

ಕಣ್ವರು—ಕೇಳು :

ಕಂದ || ಕ್ಷಿತಿಸತಿಗೆ ಸವತಿಯಾಗ
ಪ್ರತಿರಥನಂ ಸುತನ ಪೆತ್ತು ಸುತೆ ನೀಂ ತನಯಾ |
ರ್ಪಿತರಾಜ್ಯನಪ್ಪ ನಿನ್ನಯ
ಪತಿಯೊಡನೀಕ್ಷಿಸುವೆ ಮಗುಳ್ದಿನಾಯಾಶ್ರಮವಂ || ೯೮ ||

ಗೌತಮಿ—ಮಗಳೆ, ಗಮನವೇಳೆ ಕಳೆಯುತ್ತಾ ಬಂದಿತು ; ತಂದೆಯನ್ನು ಹಿಂದಕ್ಕೆ ಕಳುಹಿಸು ; ಅಥವಾ ನೀವಾದರೂ ಹಿಂದಿರುಗಬೇಕು. ಈಕೆ ಪದೇ ಪದೇ ಹೀಗೆಯೇ ನುಡಿಯುತ್ತಿರುವಳು.

ಕಣ್ವರು—ಎಲೆ ವತ್ಸೆ, ತಪೋನುಷ್ಠಾನವು ನನ್ನನ್ನು ತಡೆಯುವುದು.

ಶಕುಂ—(ತಂದೆಯನ್ನು ಮತ್ತೂ ಆಲಿಂಗಿಸಿಕೊಂಡು) ಮೊದಲೇ ತಪಶ್ಚರ್ಯೆಯಿಂದ ಪೀಡಿತವಾದ ತಂದೆಯ ಶರೀರವು ಮತ್ತೂ ನನಗೋಸ್ಕರ ಬಹಳವಾಗಿ ಕಳವಳಪಡುವುದು.

ಕಣ್ವರು—(ನಿಟ್ಟುಸಿರಿಂದ ಕೂಡಿ)

*ಕಂದ || ನಾರುತುಮಾನುಟಜವನಾ
ದ್ವಾರದ ಬಳಿಯಲ್ಲಿ ಮೊದಲೆ ನೀನಿರಿಸಿದ ನೀ |
ವಾರಬಲಿಯಂ ವಿಲೋಕಿಸಿ
ನಾರುವ ಮನದಳಲನೆಂತು ತಡೆವೆಂ ಮಗಳೇ || ೯೯ ||

---

*ರಾಗ—ಕುರಂಜಿ. ರೂಪಕತಾಳ.

**ಎಂತು ಸೈರಿಪೆಂ ಸುತೇ | ಎಂತು ಸೈರಿಪೆಂ || ಪಲ್ಲ || ನೇರಿ ನೀನು ಮುನ್ನಮುಟಜ | ದ್ವಾರದಲ್ಲಿ ರಚಿಸಿದ ನೀ | ವಾರಬಲಿಯ ನೀಕ್ಷಿಸಿ | ನಾರುವಳಲನಾಂ || ಸುತೇ ||೧|| ನೀನು ಕುಳಿತ ತಾಣಗಳನು | ನೀನು ಬೆಳೆದ ಸುಮವನವನು || ನಾನಭೀಕ್ಷಿಸಲ್ಕೆ ತೊಳಲ್ವ | ಮಾನಸವನು ನಾಂ ಸುತೇ ||೨|| ಪೊಡವಿಯೊಳಗೆ ಹೆಣ್ಣುಮಗುವ | ಪಡೆವುದೇ ಕಡುಕಷ್ಟವೈಸೆ || ಕಡುರಾಗದೆ ನಾಕುತೆ ಪೊರ | ಮಡಿಪ ದುಃಖವ || ಸುತೇ ||೩||**

ನಡೆ, ನಿನಗೆ ಮಾರ್ಗವೆಲ್ಲಾ ಮಂಗಳಕರವಾಗಲಿ !

(ಶಕುಂತಳೆಯೂ ಸಂಗಡ ಹೋಗತಕ್ಕವರೂ ಹೊರಡುವರು)

ಸಖಿಯರು—*(ಶಕುಂತಳೆಯನ್ನು ನೋಡಿ) ಹಾ ! ಹಾ ! ನಮ್ಮ ಪ್ರಿಯಸಖಿಯಾದ ಶಕುಂತಳೆಯು ವನಪಙ್ಕ್ತಿಯಿಂದ ಮರೆಯಾದಳಲ್ಲಾ !

ಕಣ್ವರು—(ನಿಟ್ಟುಸಿರನ್ನು ಬಿಟ್ಟು) ಎಲೆ ಅನಸೂಯೆ, ನಿಮ್ಮ ಒಡನಾಡಿಯಾದ ಶಕುಂತಳೆಯು ಹೊರಟುಹೋದಳು ; ಶೋಕವನ್ನು ತಡೆದು ನನ್ನೊಡನೆ ಬನ್ನಿ, ಹೋಗೋಣ.

ಇಬ್ಬರು ಸಖಿಯರೂ—† ತಂದೆಯೆ, ಶಕುಂತಳೆಯು ಇಲ್ಲದುದರಿಂದ ಶೂನ್ಯವಾದಂತಿರುವ ತಪೋವನವನ್ನು ಹೇಗೆ ಹೊಗುವೆವು ?

ಕಣ್ವರು—ಸ್ನೇಹವು ಹೀಗೆ ತೋರ್ಪಡಿಸುವುದು. (ವಿಚಾರಯುಕ್ತರಾಗಿ ಸ್ವಲ್ಪ ನಡೆದು) ಆಹ ! ಶಕುಂತಳೆಯನ್ನು ಪತಿಗೃಹಕ್ಕೆ ಕಳುಹಿಸಿ ಈಗ ನೆಮ್ಮದಿಯನ್ನು ಪಡೆದೆನು.

ಕಂದ || ಕನ್ನೆ ಪೆರನೊಡವೆ ಗಡ ಪತಿ
ಸನ್ನಿಧಿಗಿಂದವಳ ಕಳುಹಿ ನಿರ್ಮಲವಾದ |
ತ್ತೆನ್ನಯ ಮಾನಸಮಾದಂ
ತನ್ನಯ ಬಳಿಯಿಟ್ಟೊಡವೆಯ ಮಗುಳಿತ್ತನವೋಲ್ || ೧೦೦ ||

(ಎಲ್ಲರೂ ಹೊರಟುಹೋಗುವರು)

---

*ರಾಗ—ಧನಾಸರಿ.

† ಮರೆಯಾದಳಯ್ಯೋ ಸಖಿ || ಶರದಿಂದುನಿಭಮುಖಿ || ತೆರನೇನು ಪರ್ವಿದೀ | ತರುಸಂಕುಲದಿ ||೧|| ಕರಿವರಗಾಮಿನಿ | ಕಾಳಾಹಿವೇಣಿ || ಕರೆಯದೆ ಸಹಚರಿ | ಕಣ್ವಕುಮಾರಿ ||೨|| ಕೆಳದಿಯ ಬಿಟ್ಟು ನಾ | ವೆಲಿಮನೆಗೆಂತು || ತಳರ್ವೆವು ತಾತ ಪೇ | ಳಳಲನಿಂತಾಂತು ||೩||

# ಪಂಚಮಾಂಕಂ

(ಅನಂತರ ಪೀಠಗತನಾದ ರಾಜನೂ ವಿದೂಷಕನೂ ಪ್ರವೇಶಿಸುವರು)

ವಿದೂ—(ಕಿವಿಗೊಟ್ಟು) ಎಲೈ ಮಿತ್ರನೆ, ಸಂಗೀತಶಾಲೆಯ ಕಡೆಗೆ ಚಿತ್ತವಿಡು; ಅವ್ಯಕ್ತಮಧುರವಾಗಿಯೂ ವಿಶುದ್ಧವಾಗಿಯೂ ಇರುವ ಗೀತಿಯಲ್ಲಿ ಸ್ವರಯೋಗ ಕೇಳಿಬರುವುದು; ಅಲ್ಲಿ ಪೂಜ್ಯಳಾದ ಹಂಸಪದಿಕೆಯು ವರ್ಣವನ್ನು ಅಭ್ಯಾಸ ಮಾಡುವಳೆಂದು ತಿಳಿಯುವೆನು.

ರಾಜಂ—ನಾನು ಕೇಳುವವರೆಗೂ ಸುಮ್ಮನಿರು.

(ಆಕಾಶದಲ್ಲಿ ಗಾನಮಾಡಲ್ಪಡುವುದು)

*ಕಂದ || ಪೊಸತಪ್ಪ ಮಧುವ ಬಯಸುತೆ
ರಸಾಲಮಂಜರಿಯನಂತು ಚುಂಬಿಸಿ ನೀಂ ಸಾ|
ರಸವಾಸಮಾತ್ರದಿಂ ಸಂ
ತಸವಾಂತದನೆಂತು ಮರೆದೆಯೆಲೆ ಮಧುಕರನೇ || ೧೦೧ ||

ರಾಜಂ—ಆಃ! ಈ ಗೀತಿಯು ರಾಗವನ್ನು ಉಕ್ಕಿಸುತ್ತಿರುವುದು.

ವಿದೂ—ಏನು? ಈ ಗೀತಿಯ ಅಕ್ಷರಾರ್ಥವು ನಿನಗೆ ತಿಳಿಯಿತೆ?

ರಾಜಂ—(ನಸುನಕ್ಕು) ಒಂದಾವೃತ್ತಿ ಪ್ರೀತಿಸಿದವಳೀಕೆ; ಅದರಿಂದ ವಸುಮತೀದೇವಿಯ ಹೊರತಾಗೂ ಏಳಿಲನನಾಂತೆನೆಂದು ತಿಳಿದೆನು. ಎಲೈ ಮಿತ್ರನಾದ ಮಾಢವ್ಯನೆ, ಜಾಣ್ಮೆಯಿಂದ ಏಳಿಸಿದೆ ಎಂದು ಹಂಸಪದಿಕೆಗೆ ನಾನು ಹೇಳಿದೆನೆಂದು ಹೇಳು.

ವಿದೂ—ಆಜ್ಞೆಯಾದಂತಾಗಲಿ. (ಎಂದು ಎದ್ದು) ಮಿತ್ರನೇ! ಆಕೆಯು ಪರಹಸ್ತಗಳಿಂದ ನನ್ನ ಜುಟ್ಟನ್ನು ಹಿಡಿಸಿ ಹೊಡಿಸುವಾಗ ಅಪ್ಸರಸ್ತ್ರೀಯ ಕಯ್ಗೆ ಸಿಕ್ಕಿದ ಋಷಿಯಂತೆ ನನಗೆ ಬೇರೆ ಮೋಕ್ಷವಿಲ್ಲ.

ರಾಜಂ—ನಡೆ, ಜಾಣತನದಿಂದ ಆಕೆಗೆ ತಿಳಿಸು.

---

*ರಾಗ—ಶಂಕರಾಭರಣ (ನೋಟು)

ತುಂಬಿದ ನವಮಕರಂದಕೆ| ನೀಂ ಬಿಡುತಲಿ ಬಾಯಾ| ಚುಂಬಿಸಿ ಹೊಸಮಾವಿನ ಬಗೆ| ಗೊಂಬುವ ಮಂಜರಿಯಾ|| ಅಂಬುರುಹಾಶ್ರಯ ಮಾತ್ರದೆ| ನೀಂ ಬಲುಸುಖಿಸುತ್ತಂ|| ತುಂಬಿಯೆ ಯೆಂತದರೊಳಗಣ| ಹಂಬಲವನು ತೊರೆದೈ ||೧||

ವಿದೂ—ಇನ್ನೇನು ಗತಿ! (ಎಂದು ಹೊರಟು ಹೋಗುವನು)

ರಾಜಂ—(ತನ್ನಲ್ಲಿ ತಾನು) ಇದೇನು! ಗೀತಿಯ ಅರ್ಥವನ್ನು ಕೇಳಿ ಇಷ್ಟ ಜನದ ಅಗಲಿಕೆ ಯಾವುದೂ ಇಲ್ಲದಿದ್ದರೂ ನನ್ನ ಮನಸ್ಸು ಬಹಳವಾಗಿ ಕಳವಳ ಪಡುವುದು! ಒಂದುವೇಳೆ—

ವೃತ್ತ || ಇನಿದೆನಿಸಿರ್ಪ ಶಬ್ದಮನೆ ಕೇಳಿ ವಿಲೋಕಿಸಿ ರಮ್ಯವಸ್ತುವಂ
೪೫೦ ಜನಮಿಳೆಯಲ್ಲಿ ನೆಮ್ಮದಿಯನಾಂತಿರುತಿರ್ದೊಡಮುಮ್ಮಳಿಪ್ಪುದೇ |
ನೆನಲಿದು ನಿಕ್ಕುವಂ ಪರಿಕಿಸಲ್ ಬಗೆಯಿಂದಮಬೋಧಪೂರ್ವಕಂ
ನೆನೆದಪನಂತು ಭಾವದೊಳ ನಟ್ಟ ಪುರಾಭವಸೌಹೃದಂಗಳಂ || ೧೦೨ ||

(ಹೀಗೆ ಪರ್ಯಾಕುಲನಾಗಿ ನಿಲ್ಲುವನು. ಅನಂತರ ಕಂಚುಕಿ ಪ್ರವೇಶಿಸುವನು)

ಕಂಚುಕಿ—ಆಃ ಇಂಥಾ ಅವಸ್ಥೆಯನ್ನು ಹೊಂದಿರುವೆನಲ್ಲಾ!

*ಕಂದ || ಧರಣೀಶನಂತವುರದೊಳ್
ಕರದಿಂ ಪದ್ಧತಿಗೆ ಪಿಡಿದ ಬೆತ್ತವೆ ಕಳೆಯಲ್ |
ಚಿರಕಾಲಂ ನಡೆವೆಡೆ ತ
ತ್ತರಿಪೆನಗದು ಕರದೊಳೂರಿಕೊಳ್ವುದಕಾಯ್ತ್ತೈ || ೧೦೩ ||

ನಮ್ಮ ರಾಯನಿಗೆ ಧರ್ಮಕಾರ್ಯವು ಉಲ್ಲಂಘಿಸತಕ್ಕದ್ದಲ್ಲ. ಆದರೂ ಈಗತಾನೆ ಧರ್ಮಾಸನದಿಂದ ಎದ್ದ ಈತನಿಗೆ ಪುನಃ ಉಪರೋಧಕಾರಿಗಳಾದ ಕಣ್ವಶಿಷ್ಯರ ಆಗಮನವನ್ನು ತಿಳಿಸುವುದಕ್ಕೆ ನನಗೆ ಮನಸ್ಸು ಬಾರದು; ಅಥವಾ ಲೋಕಸಂರಕ್ಷಣಾಧಿಕಾರವು ವಿಶ್ರಾಂತಿಯಿಲ್ಲದುದು.

ವೃತ್ತ || ಕಟ್ಟಿದುದಲ್ಲದೊರ್ಮೆಯೆ ವರೂಥಕೆ ವಾಜಿಯನಬ್ಜನೀಪ್ರಿಯಂ
೪೬೦ ಬಿಟ್ಟುದನೆಂದು ಕಾಣನಿರುಳುಂ ಪಗಲುಂ ಚರಿಪಂ ಸಮೀರಣಂ |
ಕೊಟ್ಟನಹೀಂದ್ರನಾತ್ಮಶಿರಮಂ ಸಲೆ ಭೂಮಿಯ ಭಾರಕಿಂತಿದಂ
ನಿಟ್ಟಿಸೆ ಷಷ್ಠಭಾಗದೊಳೆ ಬಾಳ್ವರಸಂಗಮಿದಲ್ತೆ ಬೇಹರಂ || ೧೦೪ ||

ಇನ್ನು ನಾನು ನನ್ನ ಕಾರ್ಯವನ್ನು ನೋಡುವೆನು. (ನಡೆದು ನೋಡಿ) ಇದೋ ಮಹಾರಾಜನು—

---

*ರಾಗ—ಕಲಹರಪ್ರಿಯ. ಚಾಪು.

ಯಾರಿಗಿನ್ನಿದ ನಾನು | ದೂರುವೆನರರೆ | ಮೀರಿದ ದುಃಖವ ಸೈರಿಸಲಾರೆ || ಪಲ್ಲ ||

ಹುಟ್ಟಿದ್ದು ಮೊದಲಾಗಿ | ಕಟ್ಟಿಗೆ ಕೈಗೆ | ಬಿಟ್ಟದ್ದಲ್ಲವು ಸುಖ | ಪಟ್ಟದ್ದೆ ಹೀಗೆ || ೧ ||
. ಲೆಕ್ಕವಿಲ್ಲದ ದಿನ ಕಳೆದುವು ಹಿಂದೆ | ದುಃಖಪಡುವುದು ನಾಂ ಹೀಗೆಯೆ ಮುಂದೆ || ೨ ||
ಪದ್ಧತಿಯೆಂದು ಕಯ್ಯೊಳಗಾಂತ ಬೆತ್ತ | ವೃದ್ಧತೆಯೊಳಗೆ ತಪ್ಪಿಸಿತು ವಿಪತ್ತ || ೩ ||

೭೩. ವೃತ್ತ || ನಡುವಗಲಲ್ಲಿ ತಾಂ ನಡಸಿ ದಂತಿಗಳಂ ರವಿತಪ್ತಯೂಥಪಂ
ಬಿಡದತಿಶೀತಲಸ್ಥಲವ ಸೇವಿಸುವಂತೆವೊಲೀಸರೇಶ್ವರಂ |
ಇಡಿದಸುರಾಗದಿಂ ಪ್ರಜೆಗಳಂ ನಿಜಪುತ್ರರ ಪೋಷಿಸಂದದಿಂ
ನಡಸಿ ವಿವಿಕ್ತಮಾದೆಡೆಯ ಸೇವಿಸುವಂ ಸಲೆ ಶಾಂತಮಾನಸಂ || ೧೦೫ ||

(ಸಮೀಪಕ್ಕೆ ಬಂದು)

ಮಹಾರಾಜನಿಗೆ ವಿಜಯವಾಗಲಿ! ಹಿಮಾಚಲದ ತಪ್ಪಲಲ್ಲಿ ವಾಸಮಾಡುವ ತಪಸ್ವಿಗಳು ಕಣ್ವರಿಂದ ಸಂದೇಶವನ್ನು ತೆಗೆದುಕೊಂಡು ಸ್ತ್ರೀ ಸಮೇತರಾಗಿ ಬಂದಿರುವರು; ಅದನ್ನು ಕೇಳಿ ಮಾಡತಕ್ಕ ಕಾರ್ಯವನ್ನು ನಡಸಬೇಕು.

ರಾಜಂ—(ವಿಶ್ವಾಸಪೂರ್ವಕವಾಗಿ) ಏನು, ಕಣ್ವರಿಂದ ಸಂದೇಶವನ್ನು ತಂದಿರತಕ್ಕವರೆ?

ಕಂಚುಕಿ—ಹೌದು.

ರಾಜಂ—ಹಾಗಾದರೆ ಆಶ್ರಮವಾಸಿಗಳಾದ ಅವರನ್ನು ವೇದೋಕ್ತವಿಧಿಯಿಂದ ಸತ್ಕರಿಸಿ ಕರೆದುಕೊಂಡುಬರುವಂತೆ ಉಪಾಧ್ಯಾಯರಾದ ಸೋಮರಾತರಿಗೆ ನಾನು ಹೇಳಿದೆನೆಂದು ಹೇಳು; ನಾನು ಕೂಡ ತಪಸ್ವಿಗಳನ್ನು ಕಾಣುವುದಕ್ಕೆ ಯೋಗ್ಯವಾದ ಸ್ಥಳದಲ್ಲಿ ಅವರನ್ನು ನಿರೀಕ್ಷಿಸುತ್ತಿರುವೆನು.

ಕಂಚುಕಿ—ಆಜ್ಞೆಯಾದಂತಾಗಲಿ. (ಎಂದು ಹೊರಟುಹೋಗುವನು)

ರಾಜಂ—(ಎದ್ದು) ಯಾರು ಹೊರಗೆ?

(ಪ್ರತೀಹಾರಿ ಬರುವಳು)

ಪ್ರತೀಹಾರಿ—ಮಹಾರಾಜನೆ, ಆಜ್ಞಾಪಿಸಬೇಕು.

ರಾಜಂ—ವೇತ್ರವತಿ, ಹೋಮಶಾಲೆಯ ಮಾರ್ಗವನ್ನು ತೋರಿಸು.

ವೇತ್ರವತಿ—ಮಹಾರಾಜನೆ, ಹೀಗೆ ದಯಮಾಡಬೇಕು.

ರಾಜಂ—(ನಡೆದು, ಅಧಿಕಾರದ ಕಷ್ಟವನ್ನು ತೋರ್ಪಡಿಸಿ) ಪ್ರಾಣಿಗಳೆಲ್ಲಾ ತಮ್ಮ ತಮ್ಮ ಇಷ್ಟಾರ್ಥಗಳನ್ನು ಹೊಂದಿ ಸುಖಿಗಳಾಗುವರು. ಅರಸುಗಳಿಗಾದರೋ ಇಷ್ಟಾರ್ಥಸಿದ್ಧಿಯ ಸಂಗಡಲೇ ದುಃಖ ತೊಡಗಿರುವುದು.

೭೪. ವೃತ್ತ || ದೊರೆತಸಮ್ಮೈತರಲ್ ಬಯಕೆ ಹಿಂಗಿದುದೆಂಬುದದೊಂದೆ ಸಂತಸಂ
ದೊರೆತುರುರಾಜ್ಯವಂ ಸಲಹಿಕೊಂಬುದು ಕಷ್ಟವನುಂಟುಮಾಳ್ಪುದೀ |
ಪರಿಯೊಳತಿಶ್ರಮಾಪಹರಮುಂ ಶ್ರಮಕಾರಿಯುಮಲ್ಲದಿರ್ಪ ಕ
ಟ್ಟರಸುತನಂ ಸ್ವಹಸ್ತಧೃತದಂಡಮಹಾತಪವಾರಣೋಪಮಂ || ೧೦೬ ||

(ತೆರೆಯಲ್ಲಿ)

ವೈತಾಳಿಕರು—ಮಹಾರಾಜನಿಗೆ ವಿಜಯವಾಗಲಿ !

ಮೊದಲನೆಯವನು—

ಕಂದ || ಸ್ವಸುಖದೊಳಾಸೆಯನುಳಿದೀ
ವಸುಧೆಯ ಪೊರೆಯಲ್ಕೆ ನೀಂ ಬಳಲ್ವುದೆ ಸಾಜಂ |
ಬಿಸಿಲಿನ ಬೇಗೆಗೆ ತಲೆಯಾ
ನಿಸಿ ತರುವುಂ ಶ್ರಿತರ ತಂಪಿಸುವುದಲೆ ನೆಳಲಿಂ || ೧೦೭ ||

ಎರಡನೆಯವನು—

ವೃತ್ತ || ತಡೆದಪೆ ದಂಡದಿಂ ಕುಪಥದೊಳ್ ನಡೆದಪ್ಪರನೀಂ ವಿವಾದಮುಂ
ಒಡಿಪೆ ಜನಂಗಳಂ ಪೊರೆವ ಕಾರ್ಯದೊಳಗ್ಗಳಸಪ್ಪೆ ವೈಭವಂ |
ಒಡೆದಿರೆ ಬಂದು ಸಂದಣಿಪ ಬಂಧುಗಳಿರ್ಕೆ ಸಮಂತು ನಿನ್ನೊಳಾ
ದೊಡೆ ಕೊನೆಗಂಡುದೈ ಪ್ರಜೆಯ ಬಾಂಧವಕೃತ್ಯಮಿಳಾತಳಾಧಿಪಾ ||

ರಾಜಂ—ರಾಜ್ಯಭಾರದಿಂದ ಕ್ಲೇಶಪಟ್ಟ ಮನಸ್ಸುಳ್ಳ ನಾವು ಹೊಸಬರಾಗಿ ಮಾಡಲ್ಪಟ್ಟೆವು. (ಎಂದು ನಡೆಯುತ್ತಿರುವನು)

ಪ್ರತೀಹಾರಿ—ಇದೋ, ಹೋಮಧೇನುವಿನೊಡನೆ ಕೂಡಿದ ಹೋಮಶಾಲೆಯ ಹೊಸಲು, ಹೊಸದಾಗಿ ಮಾಡಿರುವ ಸಮ್ಮಾರ್ಜನೆಯಿಂದ ಶೋಭಿಸುತ್ತಿರುವುದು. ಇದನ್ನು ಆರೋಹಿಸಬೇಕು.

ರಾಜಂ—(ಅದನ್ನು ಹತ್ತಿ, ಪರಿಜನದ ಹೆಗಲಲ್ಲಿ ತನ್ನ ಕೈಯನ್ನಿಟ್ಟು ನಿಂತು) ಎಲೆ ವೇತ್ರವತಿ, ಏತಕ್ಕೋಸ್ಕರ ಪೂಜ್ಯರಾದ ಕಣ್ವರು ನನ್ನ ಸಮೀಪಕ್ಕೆ ಋಷಿಗಳನ್ನು ಕಳುಹಿಸಿರುವರು ?

ವೃತ್ತ || ವ್ರತಿಗಳ್ ಮಾಳ್ಪ ತಪಕ್ಕಡರ್ ಜನಿಸಿತೋ ಮೇಣಾವನಿಂದಾದೊಡಂ
ಹತಿ ತಾಂ ಸಂಭವಿಸಿತ್ತೊ ಧರ್ಮವನಚಾರಿಪ್ರಾಣಿವರ್ಗಕ್ಕೆ ಮೇಣ್ |
ಲತೆಗಳ್ ಪುಷ್ಪಫಲಂಗಳಂ ತಳೆವುದಂ ಮಾಣ್ದಿರ್ಪುವೋ ಮದ್ದುರಾ
ಕೃತದಿಂದೆಂದು ತೊಳಲ್ವುದೆನ್ನಯ ಮನಂ ನಿರ್ಣೈಸದೇನೊಂದುಮಂ ||೧೦೯

ಪ್ರತೀಹಾರಿ—ಎಲೈ ಮಹಾರಾಜನೆ, ಸಚ್ಚರಿತ್ರವನ್ನು ಕೊಂಡಾಡತಕ್ಕವರಾದ ಋಷಿಗಳು ಪೂಜ್ಯರಾದ ತಮ್ಮನ್ನು ಸಂಭಾವಿಸುವುದಕ್ಕೆ ಬಂದರೆಂದು ಊಹಿಸುವೆನು.

(ಅನಂತರ ಗೌತಮಿಯೊಡನೆ ಕೂಡಿದ ಶಕುಂತಳೆಯನ್ನು ಮುಂದಿಟ್ಟು ಮುನಿಗಳು ಪ್ರವೇಶಿಸುವರು ; ಇವರ ಮುಂದುಗಡೆ ಪುರೋಹಿತನೂ ಕಂಚುಕಿಯೂ ಬರುವರು)

ಕಂಚುಕಿ—ಪೂಜ್ಯರೆ, ಇತ್ತಿತ್ತ ದಯಮಾಡಬೇಕು.

ಶಾರ್ಙ್ಗರವ—ಎಲೈ ಶಾರದ್ವತನೆ!

ವೃತ್ತ || ಬಹುಭಾಗ್ಯಂಬಡೆದಿರ್ದುಮಿನ್ನೃಪವರಂ ಮರ್ಯಾದೆಯಂ ಮೀರಲೀ
ಮಹಿಯೊಳ್ ಜಾವಳನುಂ ಕರಂ ಕುಪಥದೊಳ್ ಕಾಲಿಕ್ಕನಿಂತಿರ್ದೊಡಂ |
ಅಹಹಾ! ನೋಡೆ ರಹಸ್ಯದೊಳ್ ಬಳಕೆವೆತ್ತೀಚಿತ್ತದಭ್ಯಾಸದಿಂ
ದಹನಾಕ್ರಾಂತಮೆನಿಪ್ಪ ಮಂದಿರದವೋಲ್ ಕಾಣ್ಬೆಂ ಜನಾಕೀರ್ಣಮಂ ||

ಶಾರದ್ವತಂ—ಎಲೈ ಶಾರ್ಙ್ಗರವನೆ, ಪುರಪ್ರವೇಶದಿಂದ ನೀನು ಹೀಗಾದದ್ದು ಸರಿಯೆ. ನಾನೂ ಕೂಡ—

ಕಂದ || ಮಿಂದಂ ಮೀಯದನಂ ಗುಣಿ
ನಿಂದಿತನಂ ಪವಡಿಸಿದನನೆಳ್ಚಿತಂ ಸ್ವ |
ಚ್ಛಂದಚರಂ ಬದ್ಧನ ಕಾ
ಣ್ಬಂದದೆ ಸುಖಸಂಗಿಯಾದ ಜನವಿದನರಿವೆಂ || ೧೧೧ ||

ಶಕುಂ—(ಅವಶಕುನವನ್ನು ಸೂಚಿಸಿಮಾಡಿ) ಆಹ! ಇದೇನು, ನನ್ನ ಬಲಗಣ್ಣು ಹಾರುತ್ತಿದೆ!

ಗೌತಮಿ—ಎಲೆ ಮಗಳೆ, ಅಮಂಗಳವನ್ನು ಹೋಗಲಾಡಿಸಿ ಪತಿಕುಲದೇವತೆಗಳು ನಿನಗೆ ಮಂಗಳವನ್ನುಂಟುಮಾಡಲಿ. (ಎಂದು ನಡೆಯುವಳು)

ಪುರೋಹಿತ—(ರಾಜನನ್ನು ತೋರಿಸಿ) ಎಲೈ ತಪಸ್ವಿಗಳಿರಾ, ವರ್ಣಾಶ್ರಮ ರಕ್ಷಕನಾಗಿ ಪೂಜ್ಯನಾದ ಈ ರಾಜನು ಮೊದಲೇ ಪೀಠವನ್ನು ಬಿಟ್ಟು ನಿಮ್ಮನ್ನು ಕಾದಿರುವನು; ಈತನನ್ನು ನೋಡಿರಿ.

ಶಾರ್ಙ್ಗರವ—ಎಲೈ ಬ್ರಾಹ್ಮಣೋತ್ತಮನೆ, ಇದು ಬಹಳವಾಗಿ ಕೊಂಡಾಡ ತಕ್ಕದ್ದೇ ಸರಿ; ಆದರೂ ಈ ವಿಷಯದಲ್ಲಿ ಪಕ್ಷಪಾತವಿಲ್ಲದೆ ಹೇಳುವೆವು ಕೇಳು—

ಕಂದ || ಫಲಭರದೆ ತರ್ಗುಗುಂ ತರು
ಜಲಂಗಳಿಂ ಜೋಲ್ದುವುವು ಘನಂಗಳ್ ಸಿರಿಯಿಂ |
ತಲೆವಾಗಿ ನಡೆವರುತ್ತಮ
ರಿಳೆಯಲ್ಲಿ ಪರೋಪಕಾರಿಗಳ್ಗಿದು ಸಾಜಂ || ೧೧೨ ||

ಪ್ರತೀಹಾರಿ—ಎಲೈ ಮಹಾರಾಜನೆ, ಋಷಿಗಳನ್ನು ನೋಡಿದರೆ ಪ್ರಸನ್ನಮುಖರಾಗಿರುವ ಹಾಗೆ ಕಾಣುವರು. ಆದುದರಿಂದ ಏನೋ ವಿಶ್ವಾಸಕ್ಕೆಡೆಯಾದ ಕಾರ್ಯವುಳ್ಳವರೆಂದು ತಿಳಿಯುವೆನು.

ರಾಜಂ—(ಶಕುಂತಳೆಯನ್ನು ನೋಡಿ)

ಕಂದ || ಮುಸುಕಿಟ್ಟು ತಲೆಗೆ ಸೆರಗಂ
ನಸುತೋರ್ಪ ಶರೀರಕಾಂತಿಯಿಂ ಬಳಸಿರೆ ತಾ |
ಪಸರ್ಗಳ್ ಪಣ್ಣೆಲೆ ನಡುವಣ
ಕಿಸಲಯಮೆನೆ ರಂಜಿಪೀ ಸುಶೀಲೆಯದಾವಳ್ || ೧೧೩ ||

ಪ್ರತೀಹಾರಿ—ಮಹಾರಾಜನೆ, ನನಗೇನೋ ಒಂದು ವಿಚಿತ್ರವಾದ ವಿಚಾರ ತಲೆದೋರುವುದು. ಈಕೆಯ ಆಕೃತಿಯಾದರೋ ನೋಡತಕ್ಕುದಾಗಿರುವುದು!

ರಾಜಂ—ಇದ್ದಂತಿರಲಿ; ಪರಪತ್ನಿಯನ್ನು ಬಣ್ಣಿಸತಕ್ಕುದಲ್ಲ.

ಶಕುಂ—(ಎದೆಯಲ್ಲಿ ಕೈಯಿಟ್ಟು ತನ್ನಲ್ಲಿ ತಾನು) ಎಲೆ ಮನಸ್ಸೆ, ಆರ್ಯಪುತ್ರನ ಭಾವವನ್ನು ನಿರ್ಣಯಿಸದೆ ಏತಕ್ಕೆ ಹೀಗೆ ನಡುಗುವೆ? ಅವರೆಗೂ ಧೈರ್ಯದಿಂದಿರು.

ಪುರೋಹಿತ—(ಮುಂದಕ್ಕೆ ಬಂದು) ಎಲೈ ಮಹಾರಾಜನೆ, ಇದೋ ಋಷಿಗಳನ್ನು ಸತ್ಕರಿಸಿ ಕರೆತಂದಿರುವೆನು. ಇವರು ತಮ್ಮ ಗುರುಗಳಿಂದ ಒಂದು ಸಂದೇಶವನ್ನು ತಂದಿರುವರು. ಅದನ್ನು ನೀನು ಕೇಳಬೇಕು.

ರಾಜಂ—ಸಿದ್ಧನಾಗಿರುವೆನು.

ಋಷಿಗಳು—(ಕಯ್ಗಳನ್ನೆತ್ತಿ) ಎಲೈ ಮಹಾರಾಜನೆ, ಜಯಶೀಲನಾಗು!

ರಾಜಂ—ಎಲ್ಲರಿಗೂ ನಮಸ್ಕರಿಸುವೆನು.

ಋಷಿಗಳು—ನಿನ್ನ ಕೋರಿಕೆ ಕಯ್ಗೂಡಲಿ!

ರಾಜಂ—ಮುನಿಗಳ ತಪಸ್ಸು ನಿರ್ವಿಘ್ನವಾಗಿ ನಡೆಯುವುದೆ?

ಋಷಿಗಳು—ಕಂದ || ನೃಪ ನೀಂ ರಕ್ಷಕನಾಗಿರೆ
ಸುಪುರುಷರ ತಪಕ್ಕೆ ವಿಘ್ನಮೆತ್ತಣಿನಕ್ಕುಂ |
ತಪನಂ ಪ್ರಜ್ವಲಿಸುತ್ತಿರೆ
ವಿಪುಲಾವುಂಡಲದೆ ತಿಮಿರವೆಂತುದ್ಭವಿಕುಂ || ೧೧೪ ||

ರಾಜಂ—ಹಾಗಾದರೆ ನನ್ನ ರಾಜಶಬ್ದವು ಸಾರ್ಥಕವಾದದ್ದು; ಆದರೆ ಪೂಜ್ಯರಾದ ಕಣ್ವರು ಲೋಕಾನುಗ್ರಹಾರ್ಥವಾಗಿ ಕ್ಷೇಮದಿಂದಿರುವರೆ?

ಋಷಿಗಳು—ಸಿದ್ಧಪುರುಷರಿಗೆ ಕ್ಷೇಮವೆಂಬುದು ಸ್ವಾಧೀನವಾಗಿರುವುದು. ಆ ಕುಲಪತಿಗಳಾದ ಕಣ್ವರು ಕುಶಲಪ್ರಶ್ನಪೂರ್ವಕವಾಗಿ ನಿನಗೆ ಈ ಮಾತನ್ನು ಹೇಳಿರುವರು.

ರಾಜಂ—ಪೂಜ್ಯರಾದ ಕಣ್ವರು ಏನಾಜ್ಞಾಪಿಸಿರುವರು?

ಶಾರ್ಙ್ಗರವ—ಪೂಜ್ಯನಾದ ನೀನು ನಮ್ಮ ಪುತ್ರಿಯನ್ನು ಪರಸ್ಪರ ನಿಬಂಧನೆಯಿಂದ ವರಿಸಿದ ಕಾರಣ ಪ್ರೀತರಾಗಿ ನಾವು ನಿಮ್ಮಿಬ್ಬರಿಗೆ ಆಣತಿಸುವೆವು. ಏತಕ್ಕೆಂದರೆ—

೧೫೦. ವೃತ್ತ || ತಿಳಿದೆವು ಪೂಜ್ಯರಾದವರೊಳಗ್ರಣಿಯೆಂದುರೆ ನಿನ್ನನೀ ಶಕುಂ
ತಳೆಯುಮಸಂಗಮಂ ತಳೆದ ಸತ್ಕ್ರಿಯೆಯೆಂದು ಸಮಾನಸದ್ಗುಣಂ |
ದಳೆದ ವಧೂವರರ್ಕಳನೆ ಯೋಜಿಸುತಿಂತು ಹಿರಣ್ಯಗರ್ಭನೀ
ಗಳೆ ಕಳೆಕೊಂಡನಲ್ತೆ ಬಹುಕಾಲದೆ ಬಂದ ಜನಾಪವಾದವಂ || ೧೧೫ ||

ಆದುದರಿಂದ ಈಗ ಗರ್ಭಿಣಿಯಾದ ಈಕೆಯನ್ನು ಧರ್ಮಾಚರಣಾರ್ಥವಾಗಿ ಪ್ರತಿಗ್ರಹಿಸುವುದೆಂದು.

ಗೌತಮಿ—ಎಲೈ ಆರ್ಯನೆ, ನಾನೊಂದು ಮಾತನ್ನು ಹೇಳಲಿಚ್ಛೈಸುವೆನು; ಆದರೆ ನಾನು ಮಾತಾಡುವುದಕ್ಕೇ ಅವಕಾಶವಿಲ್ಲ; ಹೇಗೆಂದರೆ—

ಕಂದ || ಗುರುಜನವನಪೇಕ್ಷಿಸದಾ
ದರದಿಂದಂ ಬಂಧುಜನವ ಕೇಳದೆ ನೀವಿ |
ರ್ವರೆ ಸ್ನೇಹದೊಳೊಡಗೂಡಿದ
ಪರಿಯಂ ನೋಡಲ್ಕೆ ನಿಮ್ಮೊಳಾರ್ಗೆಂದೊರೆವೆಂ || ೧೧೬ ||

ಶಕುಂ—(ತನ್ನಲ್ಲಿ ತಾನು) ಆರ್ಯಪುತ್ರನು ಏನು ತಾನೇ ಹೇಳುವನೋ!

ರಾಜಂ—ಇದೇನು ಇವರು ಉಪನ್ಯಾಸಿಸಿದ್ದು!

ಶಕುಂ—(ತನ್ನಲ್ಲಿ ತಾನು) ಈ ಮಾತಿನ ಉಪನ್ಯಾಸವಾದರೆ ಬಹುಯೋಗ್ಯವಾದುದು!

ಶಾರ್ಙ್ಗ—ಲೋಕವ್ಯವಹಾರವನ್ನು ಚೆನ್ನಾಗಿ ತಿಳಿದಿರುವ ನೀವೇ "ಇದೇನು ಉಪನ್ಯಾಸಿಸಿದ್ದು" ಎಂದು ಹೇಳಿದ ಮೇಲೆ ಇನ್ನು ನಾವು ಆಡತಕ್ಕುದೇನು?

ಕಂದ || ಪಳಿವುದು ಲೋಕಂ ತಂದೆಯ
ನಿಳಯದೆ ಪತಿಯುಳ್ಳ ಸತಿಯುಮಿರೆ ವಲಮುದರಿಂ |
ಲಲನೆ ಪತಿಯೆಡೆಯೊಳಿರ್ಪುದ
ನೆಳಪುದವಂಗಹಿತೆಯಾದೊಡಂ ಬಂಧುಜನಂ || ೧೧೭ ||

ರಾಜಂ—ಹಾಗಾದರೆ ನಾನು ಇವಳನ್ನು ಮದುವೆಯಾಗಿದ್ದೆನೆ?

ಶಕುಂ—(ತನ್ನಲ್ಲಿ ತಾನು) ಎಲೆ ಮನಸ್ಸೆ, ನೀನು ಕಳವಳಪಡುತ್ತಿದ್ದುದು ಈಗ ಯುಕ್ತವಾಯಿತು.

ಶಾರ್ಙ್ಗ—ಕಂದ || ಕೃತಕಾರ್ಯದ್ವೇಷಮೊ ವಿ
ಶ್ರುತ ಧರ್ಮಪರಾಙ್ಮುಖತೆಯೊ ಅವಹೇಳನಮೋ |

ರಾಜಂ—ಇದೇನು ಇಲ್ಲದುದನ್ನೂ ಆರೋಪಮಾಡುವರು ?

ಶಾರ್ಙ್ಗ—ಕಂದ || ಅತಿಶಯಮಾವರಿಸಿರ್ಕುಂ
ಕ್ಷಿತಿಯೊಳಗೈಶ್ವರ್ಯಮತ್ತರೊಳಗೀದೋಷಂ || ೧೧೮ ||

ರಾಜಂ—ವಿಶೇಷವಾಗಿ ಧಿಕ್ಕರಿಸಲ್ಪಟ್ಟೆನು.

ಗೌತಮಿ—ಎಲೆ ಮಗಳೆ, ಒಂದು ಮುಹೂರ್ತ ಲಜ್ಜೆಪಡದಿರು ; ನಿನ್ನ ಮೇಲು ಮುಸುಕನ್ನು ತೆಗೆಯುವೆನು. ಇದರಿಂದ ನಿನ್ನ ಗಂಡನು ನಿನ್ನ ಗುರುತನ್ನು ಹಿಡಿಯುವನು. (ಎಂದು ಮುಸುಕನ್ನು ತೆಗೆಯುವಳು)

ರಾಜಂ—(ಶಕುಂತಳೆಯನ್ನು ಚೆನ್ನಾಗಿ ನೋಡಿ)

*ವೃತ್ತ || ಕಡುಚೆಲುವೊಪ್ಪೆ ನಾರ್ದ ಪೊಸವೆಣ್ಣಿದನಾರಯೆ ಮುನ್ನಮೇಂ ಕರಂ
೧೧೯ ಪಿಡಿದೆನೊ ಮೇಣ್ ಕರಂಪಿಡಿಯೆನೋ ಎನುತಂ ಮನದಲ್ಲಿ ನಿರ್ಣಯಂ |
ಒಡೆಯದೆ ಕಲ್ಪದೊಳ್ ಕುಳಿರ್ವ ಮಂಜೊಳಗೊಂದಿದ ಮೊಲ್ಲೆವೂವನಾ
ರಡಿವೊಲೆ ಭೋಗಿಸಲ್ಕಮುಳಿಯಲ್ಕಮಣಂ ಬಗೆದಪೆರ್ಡಾರೆನಾಂ ||

(ಎಂದು ಆಲೋಚಿಸುವನು)

ಪರಿಜನರು—(ಮರೆಯಲ್ಲಿ) ಆಹ ! ನಮ್ಮ ರಾಯನ ಧರ್ಮದೃಷ್ಟಿಯು ಆಶ್ಚರ್ಯಕರವಾದದ್ದು ! ಅನಾಯಾಸವಾಗಿ ದೊರೆತ ಇಂಥ ರೂಪವತಿಯನ್ನು ನೋಡಿ, ಯಾರು ತಾನೇ ಯೋಚಿಸುವರು !

ಶಾರ್ಙ್ಗ—ಎಲೈ ರಾಯನೆ, ಇದೇನು ಸುಮ್ಮನಿರುವೆ ?

ರಾಜಂ—ಎಲೈ ತಪಸ್ವಿಯೆ, ಎಷ್ಟು ಯೋಚಿಸಿದರೂ ಈಕೆಯನ್ನು ಸ್ವೀಕರಿಸಿದ ಸ್ಮರಣೆ ನನಗೆ ಬರುವುದಿಲ್ಲ ; ಗರ್ಭಚಿಹ್ನೆಯುಳ್ಳ ಈಕೆಯನ್ನು ನನ್ನ ಪತ್ನಿಯೆಂದು ಹೇಗೆತಾನೆ ಪರಿಗ್ರಹಿಸಲಿ ?

ಶಕುಂ—(ಮರೆಯಲ್ಲಿ) ಮದುವೆಯಲ್ಲೇ ಸಂದೇಹವಾದ ಮೇಲೆ ಬಹುದೂರಕ್ಕೆ ಹತ್ತಿದ್ದ ನನ್ನ ಆಸೆ ಇನ್ನೆಲ್ಲಿ ?

ಶಾರ್ಙ್ಗ—ಅದೆಲ್ಲಾ ಹಾಗಿರಲಿ ;

---

*ರಾಗ—ಮುಖಾರಿ (ನೋಟು).

ರತಿಗೆಣೆಯಿಾ ಯಾಕೃತಿ ನೋಡಿದೊಡೀ ಸತಿ ಮೊದಲೆನ್ನಿಂದಂ || ಕ್ಷಿತಿಯೊಳದೇಂ ಸ್ವೀಕೃತೆಯೋ ಮೇಣ್ ಸ್ವೀ | ಕೃತೆಯಲ್ಲವೊ ಎನುತಂ || ಮತಿಯೊಳ್ ಸಂಶಯಿಸುತೆ ಹಿಮಕಣಸಂ | ಗತ ಕುಂದವನಳಿವೊಲ್ | ಹಿತವಾಗನುಭವಿಸಲ್ಕುಮಿಾಕೆಯು ಧಿ | ಕ್ಕೃತಿಗೈಯಲುಮಾರೆಂ ||

ಕಂದ || ಧನಿಕಂ ಕಳ್ಳೊಡವೆಗೆ ಕ
ಳ್ಳನ ಪಾತ್ರನ ಗೈದ ತೆರದೆ ನೀಂ ಮುಟ್ಟಿದ ಸಂ |
ದನೆಯುಂ ಬಹುಮತಿಸುತೆ ನಿ
ನ್ನನೆ ಪಾತ್ರೀಕರಿಸಿ ಬಿಟ್ಟ ಮುನಿಯೆ ವಿಮಾನ್ಯಂ || ೧೨೦ ||

ಶಾರದ್ವತ—ಎಲೈ ಶಾರ್ಙ್ಗರವನೆ, ಈಗ ನೀನು ಸುಮ್ಮನಿರು. ಎಲೌ ಶಕುಂತಳೆಯೆ, ನಾವು ಹೇಳಬೇಕಾದುದನ್ನು ಹೇಳಿದೆವು. ನಿನ್ನನ್ನು ವರಿಸಿದ ಈ ಪೂಜ್ಯನು ಹೀಗೆ ಹೇಳುತ್ತಾನೆ; ಈತನಿಗೆ ನಂಬಿಕೆಯನ್ನುಂಟುಮಾಡುವ ಉತ್ತರವನ್ನು ಕೊಡು.

ಶಕುಂ—(ಮರೆಯಲ್ಲಿ) ಅಂಥ ಅನುರಾಗವು ಈ ಅವಸ್ಥೆಯನ್ನು ಹೊಂದಿದ ಮೇಲೆ ಸ್ಮರಣೆಯನ್ನುಂಟುಮಾಡುವುದರಿಂದೇನು ಫಲ? ಮುಖ್ಯವಾಗಿ ಕೊನೆಗೆ ದುಃಖಕ್ಕೆ ಈಡಾದೆನು. (ರಾಜನಿಗೆ ಇದಿರಾಗಿ) ಆರ್ಯಪುತ್ರನೆ, (ಎಂದು ಅರ್ಧೋಕ್ತಿಯಲ್ಲಿ) ಮದುವೆಯಾಗಿರುವುದರಲ್ಲೇ ಸಂದೇಹವುಂಟಾದಮೇಲೆ ಇನ್ನು ಆರ್ಯಪುತ್ರನೆಂದು ಕರೆಯುವುದು ಹೇಗೆ? *ಎಲೈ ಪುರುಕುಲೋತ್ಪನ್ನನೆ, ಮೊದಲು ಆಶ್ರಮದಲ್ಲಿ ಕಪಟವೆನ್ನುವುದನ್ನೇ ಅರಿಯದ ಈ ಮುಗ್ಧೆಯನ್ನು ಹಾಗೆ ಶಪಥಪೂರ್ವಕವಾಗಿ ವಂಚಿಸಿ ಈಗ ಇಂಥ ಕಠಿನೋಕ್ತಿಗಳಿಂದ ತಿರಸ್ಕರಿಸುವುದು ನಿನಗೆ ಯುಕ್ತವಲ್ಲವಲ್ಲಾ?

ರಾಜಂ—(ಕಿವಿಗಳನ್ನು ಮುಚ್ಚಿಕೊಂಡು) ಶಾಂತಂಪಾಪಂ ಶಾಂತಂಪಾಪಂ!

§ಕಂದ || ಕುಲದ ನೆಗಳ್ತೆಯುಮಂ ನೀಂ
ಕಲುಷಿತಮಂ ಮಾಡಲೆನ್ನುಮಂ ಕೆಡಪಲ್ಕೇ |

---

* ರಾಗ—ಬೇಹಾಗು. ಛಾಪು.

ಸರಿಯೆ ಪೇಳ್ನಿನಗಿದು ಭೂಪ | ಓಹೋ | ಪುರುವಂಶದೀಪ || ಪಲ್ಲ || ಆಗಳಾ ಪರಿಯನು ರಾಗದಿಂ ವರಿಸಿ ನೀ || ನೀಗಳೀಪರಿಗೈವುದಲ್ಲ | ಏ | ಗತಿ ಮುಂದೆ ನಲ್ಲ || ೧ || ಶಪಥವ ಗೈದುದ ನಪಲಾಪಿಸುವುದಿದು || ನೃಪಧರ್ಮವೇನೋ ನರೇಂದ್ರಾ | ಕೃಪಾಕರ ಗುಣಸಾಂದ್ರ || ೨ || ಹರಿಗೋಲನೇರಿಸಿ | ಹರಿವ ಪ್ರವಾಹದೊ || ಳುರುಳಿಸುವುದು ನಿನಗೊಪ್ಪೆ | ಕರವಿಡಿದುದೆ ತಪ್ಪೆ || ೩ ||

§ ರಾಗ—ಕಮಾಚ್. ಛಾಪು.

(ಶಿವಶಿವಾ) ಆಹಾ ಕೇಳಲಾರೆನೀ ಮಾತ ನೀರೆ || ಪಲ್ಲ || ಏತಕೆನ್ನಯ ವಂಶ | ಖ್ಯಾತಿಯ ಕೆಡಿಸಿ ನೀ | ನಾತುರಪಡುವೆಯ | ನೀತೆ ಆಹಾ ಕೇಳ || ೧ || ಎಂತು ಯೋಚಿಸಿದೋಡೀ | ಸ್ವಾಂತದಿ ನಿನ್ನ ವೃ || ತ್ತಾಂತವೆ ಸ್ಫುರಿಸದು | ಕಾಂತೆ || ಆಹಾ || ೨ || ದಡವನೊತ್ತುವ ನದಿ || ಕೆಡವುವೋಲ್ ತೀರದ || ಗಿಡವನೆನ್ನನದೇಕೆ | ಕೆಡಿಪೆ ಯಹಾ || ೩ ||

ಕೆಳಸುವೆ ಕೂಲಂಕಷಶ್ಶೈ
ವಲಿನಿಯವೊಲ್ ತಿಳಿದ ಜಲಮುಮಂ ತಟಜಮುಮಂ || ೧೨೧ ||

ಶಕುಂ—ಆಗಲಿ, ನನ್ನನ್ನು ಪರಸ್ತ್ರೀಯೆಂದು ತಿಳಿದುದರಿಂದ ನೀನು ಹೀಗಾಗಿರುವೆ. ಈ ಅಭಿಜ್ಞಾನಾಭರಣದಿಂದ ನಿನ್ನ ಸಂದೇಹವನ್ನು ಹೋಗಲಾಡಿಸುವೆನು.

ರಾಜಂ—ಇದೀಗ ಒಪ್ಪತಕ್ಕದ್ದು.

ಶಕುಂ—(ಬೆರಳನ್ನು ಸವರಿ) ಹಾ! ಹಾ! ನನ್ನ ಬೆರಳಿನ ಉಂಗುರವಿಲ್ಲವಲ್ಲಾ! (ಎಂದು ದುಃಖದಿಂದ ಗೌತಮಿಯನ್ನು ನೋಡುವಳು)

ಗೌತಮಿ—ಎಲೆ ಮಗಳೆ, ನೀನು ಶಕ್ರಾವತಾರದಲ್ಲಿ ನಿಂದು ಶಚೀತೀರ್ಥವನ್ನು ವಂದಿಸುತ್ತಿರುವಾಗ ನಿನ್ನ ಉಂಗುರವು ಬೆರಳಿನಿಂದ ಜಾರಿ ಬಿದ್ದಿರಬಹುದು.

ರಾಜಂ—(ನಕ್ಕು) ಸ್ತ್ರೀಯರು ಸಮಯಕ್ಕೆ ತಕ್ಕ ಬುದ್ಧಿಯುಳ್ಳವರೆಂಬುದು ಸುಳ್ಳಲ್ಲ.

ಶಕುಂ—ಈ ವಿಷಯದಲ್ಲಿ ವಿಧಿಯು ತನ್ನ ಶಕ್ತಿಯನ್ನು ತೋರಿಸಿತು; ಮತ್ತೊಂದು ಗುರುತನ್ನು ಹೇಳುವೆನು.

ರಾಜಂ—ನೋಡತಕ್ಕದಂತೂ ಆಯಿತು; ಇನ್ನು ಕೇಳತಕ್ಕದು ಬಂದಿತು.

ಶಕುಂ—ಎಲೈ, ಒಂದು ದಿವಸ ನವಮಾಲಿಕಾ ಮಂಟಪದಲ್ಲಿ ಕುಳಿತಿರುವಾಗ ನೀರು ತುಂಬಿದ ಕಮಲಪತ್ರದ ಪಾತ್ರೆಯು ನಿನ್ನ ಕಯ್ಯಲ್ಲಿತ್ತು.

ರಾಜಂ—ಆಮೇಲೆ?

ಶಕುಂ—ಆಗ ದೀರ್ಘಾಪಾಂಗವೆಂಬ ನನ್ನ ಜಿಂಕೆ ಮರಿಯು ಸಮೀಪಕ್ಕೆ ಬರಲು, ಆ ಬಳಿಕ ನೀನು ಕರುಣದಿಂದ 'ಮೊದಲು ಇದು ಜಲಪಾನ ಮಾಡಲಿ' ಎಂದು ನೀರನ್ನು ತೋರಿಸಲಿಲ್ಲವೆ? ಅದು ನಿನ್ನಲ್ಲಿ ಅಪರಿಚಯದಿಂದ ನಿನ್ನ ಕಯ್ಯ ಸಮೀಪಕ್ಕೆ ಬರಲಿಲ್ಲ; ಆಮೇಲೆ ಆ ಜಲಪಾತ್ರೆಯನ್ನೇ ನಾನು ಕೈಗೆ ತೆಗೆದುಕೊಂಡಾಗ ಬಂದು ಜಲಪಾನಮಾಡಿತು. ಅದನ್ನು ನೋಡಿ, ಎಲ್ಲವೂ ಸಮಾನಗಂಧ ವಸ್ತುವಿನಲ್ಲಿ ವಿಶ್ವಾಸಪಡುವುದು. ನೀವಿಬ್ಬರೂ ಅರಣ್ಯವಾಸಿಗಳು—ಎಂದು ನೀನು ನನ್ನನ್ನು ಹಾಸ್ಯಮಾಡಲಿಲ್ಲವೆ?

ರಾಜಂ—ಹೀಗೆ ತಮ್ಮ ಕಾರ್ಯ ನೆರವೇರುವುದಕ್ಕಾಗಿ ಸ್ತ್ರೀಯರು ಜೇನುತುಪ್ಪದಂತಿರುವ ಸುಳ್ಳುಮಾತುಗಳಿಂದ ಕಾಮಿಗಳನ್ನು ಸೆಳೆದುಕೊಳ್ಳುವರು.

ಗೌತಮಿ—ಎಲೈ ಮಹಾರಾಜನೆ, ನೀನು ಹೀಗೆ ಹೇಳತಕ್ಕದಲ್ಲ. ತಪೋವನದಲ್ಲಿ ಬೆಳೆದ ಈಕೆಯು ಕಪಟವನ್ನು ಅರಿತವಳಲ್ಲ.

ರಾಜಂ—ಎಲೌ ವೃದ್ಧತಾಪಸಿಯೆ,

ಕಂದ || ಕಲಿಸದೆ ಬರ್ಪುದು ಕೌಶಲ
ಮಿಳೆಯೊಳಮಾನುಷಿಗಮರಿದ ಪೆಣ್ಗಳ ಮಾತೇಂ |
ಸಲಹಿಪುದಲೆ ಮರಿಯುಂ ಕೋ
ಗಿಲೆವೆಣ್ ಕಾಕಂಗಳಿಂದೆ ಪಾರುವವರೆಗಂ || ೧೨೨ ||

ಶಕುಂ—*(ಕೋಪದಿಂದ ಕೂಡಿ) ಎಲೈ ಅನಾರ್ಯನೆ, ನಿನ್ನ ಮನದ ಸಂದೇಹದಿಂದ ಎಲ್ಲವನ್ನೂ ಎಣಿಸಿ ಮಾತಾಡುವೆ; ಮೇಲೆ ಧರ್ಮಕಂಚುಕವನ್ನು ತೊಟ್ಟು ಹುಲ್ಲುಮುಸುಕಿದ ಬಾವಿಯಂತಿರುವ ನಿನಗೆ ಯಾವ ಮನುಷ್ಯನು ತಾನೆ ಸಾಟಿಯಾಗುವನು ?

ರಾಜಂ—(ತನ್ನಲ್ಲಿ ತಾನು) ನನ್ನ ಬುದ್ಧಿಗೆ ಸಂದಿಗ್ಧತೆಯನ್ನುಂಟುಮಾಡುವ ಈಕೆಯ ಕೋಪವು ನಿಷ್ಕಪಟವಾಗಿರುವಂತೆ ತೋರುವುದು; ಹಾಗೆಯೇ ಸರಿ. ಈಕೆಯು,

ಕಂದ || ಒರೆದೇಕಾಂತಪ್ರಣಯದ
ಪರಿಯುಂ ವಿಸ್ಮರಣದಾರುಣಂ ತಿಳಿಯದೊಡಾಂ |
ಅರುಣಾಕ್ಷಿ ಮುರಿದ ಪುರ್ವಿದು
ಕರಮೆಸೆವುದು ಮುಳಿದು ಮುರಿದ ಮದನನ ಧನುವೋಲ್ || ೧೨೩ ||

(ಪ್ರಕಾಶವಾಗಿ) ಎಲೌ ಮಂಗಳಾಂಗಿಯೆ, ದುಷ್ಯಂತನ ಚರಿತ್ರೆಯು ಪ್ರಸಿದ್ಧವಾದುದು; ಆದರೂ ನಿನ್ನನ್ನು ಮದುವೆಯಾದುದು ನನಗೆ ಕಾಣಬರುವುದಿಲ್ಲ.

ಶಕುಂ—†ಮುಖದಲ್ಲಿ ಮಧುವನ್ನೂ ಹೃದಯದಲ್ಲಿ ವಿಷವನ್ನೂ ಧರಿಸಿರುವ ಈತನ ಕೈ ಸೇರಿದುದಕ್ಕೆ ನಾನು ಚೆನ್ನಾಗಿ ಸ್ವಚ್ಛಂದಚಾರಿಣಿಯಾದೆನು! (ಎಂದು ಸೆರಗಿನಿಂದ ಮುಖವನ್ನು ಮುಚ್ಚಿಕೊಂಡು ರೋದಿಸುವಳು)

---

*ರಾಗ—ಕಲಹರಪ್ರಿಯ. ಆದಿತಾಳ.

ಏನನಾಡಿದೆ | ನೀ | ನೇನನಾಡಿದೆ || ಪಲ್ಲ || ಮಾನವೇಂದ್ರನಾಗೀ ಸೊಲ್ಲ | ನಾನರಿಯದಾದೆನಲ್ಲ || ಅನು || ಏನು ತಿಳಿಯದಂಗನೆಯನು | ನೀನುಪಾಯದಿಂದ ವರಿಸಿ || ಜ್ಞಾನಹೀನನಂತೆ ನಿನ್ನ | ಮಾನಸಕ್ಕೆ ಭ್ರಂದ ತೆರದೊ | ಳೀನ || ೧ || ಮಾನವೇನೊ ಧೂರ್ತ ನಿನ್ನ | ಮಾನಸದನು ಮಾನದಿಂದ || ನೀನೆಣಿಸುತೆಲ್ಲವನಾಂ | ಮೌನವಾಂತಿರಲ್ಕೆ ಗಣಿಸ | ದೇನ || ೨ || ಭಾಪು ಭಾಪು ತೃಣಪರೀತ | ಕೂಪರೂಪ ಭೂಪ ನಿನ್ನ || ನಾ ಪುರುಕುಲ ದೀಪನೆಂದು ಕೈಪಿಡಿದುದಕಿದಲೆ ಫಲವ | ದೇನ || ೩ ||

† ಈ ಅರ್ಥ ಬರುವ ಹಾಡನ್ನು ಮುಂದಿನ ಪುಟದ ಅಡಿಯಲ್ಲಿ ನೋಡಿ.

ಶಾರ್ಙ್ಗ—ಹೀಗೆ ತಾನಾಗಿ ಮಾಡಿಕೊಂಡ ಚಾಪಲ್ಯವು ತನ್ನನ್ನು ಬಿಡದೆ ಸುಡುವುದು.

ಕಂದ || ಅದರಿಂ ಮಿಗೆ ಪರಿಕಿಸಿ ಮಾ
ಳ್ಪುದು ತಾನೇಕಾಂತಸಂಗಮುವಸಲ್ಲದಿರಲ್ |
ಹೃದಯವನಣಮುರಿಯದೆ ಮಾ
ಡಿದ ಸೌಹೃದಮಿಂತು ಜಗದೊಳಹಿತಮೆನಿಕ್ಕುಂ || ೧೨೪ ||

ರಾಜಂ—ಎಲೆ ತಪಸ್ವಿಗಳೇ, ಈಕೆಯ ಮಾತಿನಲ್ಲೇ ನಂಬಿಕೆಯಿಸ್ಸಿಟ್ಟು ಕಠಿನೋಕ್ತಿಗಳಿಂದ ನಮ್ಮನ್ನು ಏತಕ್ಕೆ ಹೀಗೆ ಆಕ್ಷೇಪಿಸುವಿರಿ?

ಶಾರ್ಙ್ಗ—(ಕೋಪದಿಂದ) ಆಹ! ತಾವು ಬಹಳ ಹೆಚ್ಚುಕಡಿಮೆ ಮಾತು ಕೇಳದ ಹಾಗಾಯಿತು!

ಕಂದ || ಜನಿ ಮೊದಲಾಗಿರೆ ಮೋಸವ
ನಿನಿಸುಂ ಕಾಣದರ ನುಡಿಯುಸತ್ಯಂ ಪರಮಂ |
ಚನೆ ವಿದ್ಯೆಯೆಂದು ಕಲ್ತಾ
ಜನಗಳ ನುಡಿಗಳ್ ಪ್ರಮಾಣಮಲ್ಲವೆ ಜಗದೊಳ್ || ೧೨೫ ||

ರಾಜಂ—ಎಲೈ ಸತ್ಯವಾದಿಯಾದ ತಪಸ್ವಿಯೆ, ನೀನಾಡಿದಂತೆ ನಾವು ವಂಚಕರೇ ಆಗಲಿ; ಈಕೆಯನ್ನು ವಂಚಿಸಿದುದರಿಂದ ನಮಗೆ ಬರತಕ್ಕುದೇನು?

ಶಾರ್ಙ್ಗ—ನಿನಗೆ ಬರತಕ್ಕುದೇನೆ? ದೋಷ.

ರಾಜಂ—ದೋಷವನ್ನು ಪುರುಕುಲದವರು ಬಯಸುವರೆಂಬುದಿದು ನಂಬ ತಕ್ಕುದಲ್ಲ.

ಶಾರದ್ವತ—ಎಲೈ ರಾಯನೆ, ಉತ್ತರಪ್ರತ್ಯುತ್ತರಗಳಿಂದ ಏನು ಪ್ರಯೋಜನ? ಗುರುಗಳಾಜ್ಞೆಯನ್ನಂತೂ ನಡಿಸಿದುದಾಯಿತು. ಇನ್ನು ನಾವು ಹೊರಟುಹೋಗು ವೆವು; ಆದುದರಿಂದ—

---

†ರಾಗ—ನಾದನಾಮಕ್ರಿಯೆ. ಆದಿತಾಳ.

ಆರಿಗೆ ಹೇಳುವೆ | ನೀ ರಾಜನ ಕಯ್ಯ ಸೇರಿದುದಕೆ ನಾಂ | ಸ್ವೈರಿಣಿಯಾದೆನಾ || ಪಲ್ಲ || ವದನದಿ ಮಧುವನು | ಹೃದಯದಿ ವಿಷವನು || ಹುದಗಿಸಿದೀತನ | ಮದುವೆಯಾದಮೇಲೆ || ೧ || ಮಾಡುವುದೇನಿನ್ನು | ನೋಡದೆ ದುಡುಕಿನಿಂ || ಮಾಡಿಕೊಂಡುದಕಿ | ನ್ನಾಡುವುದಾರನು || ೨ || ಗುರುಜನವೆಸಗಿದ | ಪರಿಣಯವೇಸರಿ || ಯೊರೆವುದಿನ್ನೇಂ ಸ್ವಯಂ | ವರವಿಧಿಯಾಪರಿ || ೩ || ಸ್ತ್ರೀಜನ್ಮವೇ ದುಃಖ | ಭಾಜನವಲೆ ಮಹಾ | ರಾಜನ ವರಿಸಿ ನಿ | ರ್ವ್ಯಾಜವಿಂತಾದಮೇಲಾರಿಗೆ || ೪ ||

ಕಂದ || ಮಡದಿ ನಿನಗೀಕೆಯಿಾಕೆಯು
ಬಿಡುವೊಡೆ ಬಿಡು ಪತಿಕರಿಪೊಡೆ ನೀಂ ಪತಿಕರಿಸೈ |
ಮಡದಿಯರೊಳೆಣಿಸೆ ಪತಿಗೊಡ
ಬಡುವುದು ಗಡ ಸರ್ವತೋಮುಖಂ ಸ್ವಾತಂತ್ರ್ಯಂ || ೧೨೬ ||

ಗೌತಮಿ, ನಡೆ ಮುಂದಕ್ಕೆ.

(ಎಂದೆಲ್ಲರೂ ಹೊರಡುವರು)

ಶಕುಂ—ಇನ್ನೇನು ಗತಿ ! ಈ ಧೂರ್ತನು ನನ್ನನ್ನು ವಂಚಿಸಿಬಿಟ್ಟನು ; ದುಃಖಕ್ಕೆ ಗುರಿಯಾದ ನನ್ನನ್ನು ನೀವೂ ಬಿಟ್ಟು ಹೋಗುತ್ತೀರಾ ? (ಎಂದು ಅವರ ಸಂಗಡ ಹೊರಡುವಳು)

ಗೌತಮಿ—(ನಿಂತು) ಎಲೈ ವತ್ಸ ಶಾರ್ಙ್ಗರವನೆ, ಇದೋ ಶೋಕಾಕುಲೆಯಾದ ಶಕುಂತಳೆ ನಮ್ಮ ಸಂಗಡ ಬರುವಳು ; ಕೈಹಿಡಿದ ಗಂಡನೇ ಹೀಗೆ ಕ್ರೂರನಾಗಿ ತಿರಸ್ಕರಿಸಿದ ಮೇಲೆ ನನ್ನ ಮಗು ಇನ್ನೇನು ಮಾಡಬಲ್ಲುದು ?

ಶಾರ್ಙ್ಗ—(ಕೋಪಗೊಂಡು ಹಿಂದಕ್ಕೆ ತಿರುಗಿ) ದೋಷದಲ್ಲೇ ದೃಷ್ಟಿಯುಳ್ಳ ಎಲೆ ದುಷ್ಟೆ, ಇದೇನು ! ಸ್ವಾತಂತ್ರ್ಯವನ್ನು ವಹಿಸಿದೆ ? (ಶಕುಂತಳೆ ಭಯದಿಂದ ನಡುಗುವಳು) ಶಕುಂತಳೆ !

ಕಂದ || ಅರಸಾಡಿದಂತೆ ನೀನಾ
ಗಿರೆ ನಿನ್ನಂ ತಂದೆಯೆಂತು ಮನೆಯಂ ಪುಗಿಪಂ |
ಪರಿಶುದ್ಧೆಯಾನೆನುತ್ತಿರಿ
ದಿರೆ ನೀಂ ಪತಿಗೃಹದೆ ದಾಸಿಯಪ್ಪುದುಮುಚಿತಂ || ೧೨೭ ||

ನಿಲ್ಲು ನಿಲ್ಲು ; ನಾವಿನ್ನು ಹೊರಟುಹೋಗುವೆವು.

ರಾಜಂ—ಎಲೈ ತಪಸ್ವಿಗಳೇ, ಇದೇತಕ್ಕೆ ಈಕೆಯನ್ನು ಬಿಟ್ಟು ಹೋಗುತ್ತೀರಿ ?

ಕಂದ || ಕುಮುದವನೆ ವಿಕಾಸಿಸುವಂ
ಹಿಮಕಿರಣಂ ತಾವರೆಯನೆ ರವಿಯರಲಿಸುವಂ |
ಯಮಿವರ ಪರಕಾಂತಾಸಂ
ಗಮದೊಳ್ ಮನವಿಕ್ಕರಲೆ ಜಿತೇಂದ್ರಿಯರಿಳೆಯೊಳ್ || ೧೨೮ ||

ಶಾರ್ಙ್ಗ—ಮತ್ತೊಬ್ಬಳ ಸಂಗದಿಂದ ಪೂರ್ವದಲ್ಲಿ ನಡೆದುದನ್ನು ನೀನು ಮರೆದುದೇ ಆದರೆ ಅದೆಂತು ಅಧರ್ಮವೆಂದು ಭಯಪಡುವೆ ?

ರಾಜಂ—ಈ ವಿಷಯದಲ್ಲಿ ಗುರುಲಾಘವವನ್ನು ತಮ್ಮನ್ನೇ ಕೇಳುವೆನು :

ಕಂದ || ಪಿರಿದಾಂ ಮೂಢನೊ ಮೇಣಿವ
ಳೊರೆದಪಳೋ ಪುಸಿಯನೆಂಬ ಸಂಶಯದೊಳ್ ಪೆಂ |
ಡಿರ ತೊರೆದನಾದಪೆಂ ಮೇಣ್
ಪರವನಿತೆಯ ಕೂಡಿದಘಕೆ ಗುರಿಯಾದಪ್ಪೆಂ || || ೧೨೯ ||

ಪುರೋಹಿತ—(ವಿಚಾರಮಾಡಿ) ಹಾಗಿದ್ದ ಪಕ್ಷದಲ್ಲಿ ಹೀಗೆ ಮಾಡಬೇಕು.

ರಾಜಂ—ಅದೇನು ? ಆಜ್ಞಾಪಿಸಬೇಕು.

ಪುರೋ—ಪೂಜ್ಯೆಯಾದ ಈಕೆಯು ಹೆರುವ ವರೆಗೂ ನನ್ನ ಮನೆಯಲ್ಲಿ ಇರಲಿ ; ಹೀಗೇತಕ್ಕೆ ಹೇಳುವಿರೆಂದರೆ, ಮೊದಲಲ್ಲಿ ಚಕ್ರವರ್ತಿ ಲಕ್ಷಣವುಳ್ಳ ಪುತ್ರನು ಉದಿಸುವನೆಂದು ಋಷಿಗಳು ಹೇಳಿಯೇ ಇರುವರು ; ಹಾಗೆ ಈ ಮುನಿಪುತ್ರಿಯಲ್ಲಿ ಹುಟ್ಟುವ ಮಗನು ಚಕ್ರವರ್ತಿ ಲಕ್ಷಣದಿಂದ ಕೂಡಿರುವನಾದರೆ ಆಮೇಲೆ ಅಭಿನಂದಿಸಿ ಈಕೆಯನ್ನು ನಿನ್ನ ರಾಣಿವಾಸಕ್ಕೆ ಸೇರಿಸು ; ಹಾಗೆ ಆಗದೆ ಇರುವ ಪಕ್ಷಕ್ಕೆ ಈಕೆಯನ್ನು ತಂದೆಯ ಬಳಿಗೆ ಕಳುಹಿಸುವುದು ಸಿದ್ಧವಾಗಿರುವುದು.

ರಾಜಂ—ಗುರುಗಳು ಒಪ್ಪಿದಂತಾಗಲಿ.

ಪುರೋ—ಎಲೌ ವತ್ಸೆ, ನನ್ನ ಸಂಗಡ ಬಾ.

ಶಕುಂ—*ಎಲೌ ಪೂಜ್ಯಳಾದ ಭೂಮಿದೇವಿಯೆ, ನನಗೋಸ್ಕರ ಬಾಯನ್ನು ತೆರೆ. (ಎಂದು ಅಳುತ್ತಾ ಪುರೋಹಿತನ ಮತ್ತು ತಪಸ್ವಿಗಳ ಸಂಗಡ ಹೊರಟು ಹೋಗುವಳು)

(ರಾಜನು ಶಾಪದಿಂದ ಮರವೆಯುಳ್ಳವನಾಗಿ ಶಕುಂತಳೆಯ ಸಂಗತಿಯನ್ನು ಚಿಂತಿಸುತ್ತಿರುವನು)

ತೆರೆಯಲ್ಲಿ—ಆಶ್ಚರ್ಯ ! ಆಶ್ಚರ್ಯ !

ರಾಜಂ—(ಕೇಳಿ) ಇದೇನಾಗಿರಬಹುದು !

(ಪುರೋಹಿತನು ಪ್ರವೇಶಿಸಿ)

ಪುರೋ—(ಆಶ್ಚರ್ಯದೊಡನೆ ಕೂಡಿ) ಎಲೈ ಮಹಾರಾಜನೆ, ಒಂದು ಆಶ್ಚರ್ಯ ನಡೆಯಿತಲ್ಲಾ !

---

*ರಾಗ—ಶಹನ. ಆದಿತಾಳ.

ಪಾಪಿಪಾಪಿ ವಿಧಿ ಬಲ್ಲಿದನಲೆ ನೀ | ನೀ ಪರಿಯೆನ್ನ ಸಂತಾಪಿಪರಾರು || ಪಲ್ಲ || ಆರಿಗೆ ದೂರುವೆ | ನಾರೊಳು ಹೋರುವೆ || ಭೂರಮಣನೆ ನೀತಿ | ದೂರನೆಂದೆನಿಸೆ || ೧ || ಏತಕೀ ಭಾಗ್ಯವಿ | ನ್ನೇತಕೀ ಜನ್ಮ ತಾ || ನಾತನ ಕೃಪೆಯಿಾ | ರೀತಿಯೊಳಾಗೆ || ೨ || ಓವೊ ತಾಯೆ ಭೂ | ದೇವಿ ಬಾಯ್ದೆರೆಯೌ || ಜೀವಿತೇಶನ ಬಿಟ್ಟ | ಜೀವವಿದೇಕೆ || ೩ ||

ರಾಜಂ—ಅದೇನು ?

ಪುರೋ—ಎಲೈ ರಾಜನೆ, ಕಣ್ವಶಿಷ್ಯರು ಹೊರಟುಹೋದ ಮೇಲೆ,

ಕಂದ || ಪಳಿಯುತೆ ನಿಜಭಾಗ್ಯವನಾ
ಯೆಳೆಯಳ್ ತೋಳೆತ್ತಿ ಗೋಳಿಡಲ್ಕುಜ್ಜುಗಿಸಲ್ |

ರಾಜಂ—ಆಯಿತು ; ಆಮೇಲೆ ?

ಪುರೋ—ಬೆಳಗೊಂದು ಪೆಣ್ಣ ರೂಪಿಂ
ದೆಳೆದೊಯ್ದುತ್ತವಳನಪ್ಸರಸ್ಸರದೆಡೆಯೊಳ್ || ೧೩೦ ||

(ಎಲ್ಲರೂ ಆಶ್ಚರ್ಯಪಡುವರು)

ರಾಜಂ—ಎಲೈ ಪೂಜ್ಯರೆ, ವಸ್ತುವು ನಮ್ಮಿಂದ ಮೊದಲೇ ತಿರಸ್ಕರಿಸಲ್ಪಟ್ಟಿರುವುದು ; ವ್ಯರ್ಥವಾದ ತರ್ಕದಿಂದ ಇನ್ನು ಬರುವುದೇನು ? ತಾವು ವಿಶ್ರಾಂತಿಗೊಳ್ಳಬೇಕು.

ಪುರೋ—(ನೋಡಿ) ಜಯಶೀಲನಾಗು. (ಎಂದು ಹೊರಟುಹೋಗುವನು)

ರಾಜಂ—ಎಲೆ ವೇತ್ರವತಿ, ನನ್ನ ಮನಸ್ಸು ಕಳವಳಗೊಂಡಿರುವುದು ; ಶಯ್ಯಾಗೃಹದ ಮಾರ್ಗವನ್ನು ತೋರಿಸು.

ಪ್ರತೀಹಾರಿ—ಮಹಾರಾಜನೆ, ಇತ್ತಿತ್ತ ದಯಮಾಡಬೇಕು. (ಎಂದು ನಡೆಯುವಳು)

ರಾಜಂ—(ತನ್ನಲ್ಲಿ ತಾನು)

*ಕಂದ || ನೆನೆಯೆನದೆಂತುಂ ತೊರೆದಾ
ಮುನಿಪುತ್ರಿಯನೆನ್ನ ಪತ್ನಿಯೆಂದಾದೊಡಮಾ |
ವನಿತೆಯ ನೆನೆನೆನೆದಳಲುವ
ಮನವಿದು ನಂಬುಗೆಯನೆನಗೆ ಜನಿಪವೊಲಿರ್ಕುಂ || ೧೩೧ ||

(ಎಂದೆಲ್ಲರೂ ಹೊರಟು ಹೋಗುವರು)

---

*ರಾಗ—ಕಲಹರಪ್ರಿಯ. ಆದಿತಾಳ.

ಅನುತಾಪವೇನಿದು | ಅನಿಮಿತ್ತವಾಗಿ || ಮನದೊಳುದಿಪುದಿದ | ರನುವನರಿಯೆನಾಂ || ೧ ||
ಮುನಿಸುತೆಯನು ನಿಜ | ವನಿತೆಯನ್ನುತಲೀ || ಮನದೊಳಗೆಂತು ನಾಂ | ನೆನೆಯದಿದ್ದರುವಿಾ || ೨ ||
ಅಂಬುರುಹಾಕ್ಷಿಯ | ಹಂಬಲಿಸುವ ಬಗೆ || ನಂಬುಗೆಗೊಳಿಪುದೇ | ನೆಂಬೆನಿದಕೆ ನಾಂ || ೩ ||

ಪಂಚಮ ಷಷ್ಠಾಂಕಗಳ ಮಧ್ಯದಲ್ಲಿ

# ಪ್ರವೇಶಕಂ

(ಅನಂತರದಲ್ಲಿ ನಗರಾಧಿಕಾರಿ ಭಾವನೂ, ಆತನ ಹಿಂದೆ ಹಿಂಗಟ್ಟುಮುರಿಯುಳ್ಳ ಪುರುಷನನ್ನು ಹಿಡಿದುಕೊಂಡು ಇಬ್ಬರು ಕಾವಲುಗಾರರೂ ಬರುವರು)

ಕಾವಲುಗಾರರು—(ಹೊಡೆದು) ಎಲಾ ಕುಂಭೀಲಕನೆ, ಹೇಳು ಹೇಳು, ರತ್ನಮಯವಾಗಿ ಹೆಸರನ್ನು ಕೆತ್ತಿರುವ ರಾಜಕೀಯವಾದ ಈ ಉಂಗುರವನ್ನು ಎಲ್ಲಿ ಕದ್ದೆ?

ಪುರುಷ—(ಭಯವನ್ನು ಅಭಿನಯಿಸಿ) ಎಲೈ ಭಾವಮಿಶ್ರರೆ, ಪ್ರಸನ್ನರಾಗಬೇಕು. ನಾನು ಅಂತಹ ಅಕಾರ್ಯವನ್ನು ಮಾಡತಕ್ಕವನಲ್ಲ.

೧ ನೆಯ ಕಾವಲುಗಾರ—ಯೋಗ್ಯನಾದ ಬ್ರಾಹ್ಮಣನೆಂದು ರಾಜನು ನಿನಗೆ ತನ್ನ ಉಂಗುರವನ್ನು ಕೊಟ್ಟನೇನೋ?

ಪುರುಷ—ಕೇಳಬೇಕು; ನಾನು ಶಕ್ರಾವತಾರತೀರ್ಥದಲ್ಲಿ ವಾಸಮಾಡತಕ್ಕ ಅಂಬಿಗನು.

೨ ನೆಯವನು—ಎಲೆ ಕಳ್ಳ! ನಾವು ನಿನ್ನ ಜಾತಿಯನ್ನು ಕೇಳಿದೆವೇನೋ?

ಭಾವ—ಎಲೈ ಸೂಚಕನೆ, ಎಲ್ಲವನ್ನೂ ಕ್ರಮವಾಗಿ ಹೇಳಲಿ; ಅಷ್ಟರೊಳಗೆ ಇವನನ್ನು ಪ್ರತಿಬಂಧಪಡಿಸಬೇಡ.

ಕಾವಲುಗಾರರು—ಭಾವನ ಆಜ್ಞೆಯಾದಂತಾಗಲಿ.

ಭಾವ—ಹೇಳು ಹೇಳು.

---

ರಾಗ—ಶಂಕರಾಭರಣ (ನೋಟು)

ಸಿಕ್ಕಿತು ಸಿಕ್ಕಿತು ಸಿಕ್ಕಿತಾಹ | ದಕ್ಕಿತು ದಕ್ಕಿತು ದಕ್ಕಿತಾಹ || ಪ || ಪೋಗಿ ನಾ ಮಿಾನ್ಗಳನೆಲ್ಲಾ ಮಾರೆ | ಹಾಗವನಲ್ಲದೆ ಕಾಣಲಾರೆ || ಈಗಲೀ ಮುದ್ರಿಕೆ ಕಯ್ಯಸೇರೆ | ಭೋಗದೇವೇಂದ್ರನು ನಾನು ಬೇರೆ || ಸಿಕ್ಕಿತು || ೧ || ಕಿತ್ತುಕಿತ್ತುದುರಲಿ ಬಲೆಗಳೆಲ್ಲಾ | ನೆತ್ತಿಯೊಳ್ ಹೊತ್ತು ಸಾಕಾದೆನಲ್ಲಾ || ಬತ್ತಿದಾ ಕೆರೆಗಳ ಹಂಬಲಿಲ್ಲಾ | ಸುತ್ತಿದಾ ಕಷ್ಟವ ದೇವ ಬಲ್ಲ || ಸಿಕ್ಕಿತು || ೨ || ಅಂಗಡಿ ಬೀದಿಯ ನಾನು ಸೇರಿ | ಉಂಗುರವನ್ನು ಲೇಸಾಗಿ ಮಾರಿ || ಪೊಂಗಿ ಪೆರ್ಮ್ಮೆಗೆ ಕಟ್ಟುತೇರಿ | ಅಂಗನೆಗೂಡಿ ಭೋಗಿಪೆನು ಮಿಾರಿ || ಸಿಕ್ಕಿತು || ೩ ||

ಪುರುಷ—ನಾನು ಬಲೆ, ಗಾಳ, ಮೊದಲಾದವುಗಳಿಂದ ಮೀನುಗಳನ್ನು ಹಿಡಿದು ಹೆಂಡಿರು ಮಕ್ಕಳನ್ನು ಸಾಕುವೆನು.

ಭಾವ—(ನಕ್ಕು) ಆಹ! ನಿನ್ನ ಜೀವನವು ಬಹು ಪರಿಶುದ್ಧವಾದುದು.

ಪುರುಷ—ಸ್ವಾಮಿ, ಕೇಳಬೇಕು.

ಕಂದ || ಕ್ಷಿತಿಯೊಳ್ ಕುಲಧರ್ಮಂ ನಿಂ
ದಿತಮಾದೊಡಮುಳಿವುದಲ್ಲದಂ ಪಶುವಂ ತಾಂ |
ಹತಿಗೆಯ್ವುದರೊಳ್ ಶ್ರೋತ್ರಿಯ
ನತಿಕರ್ಕಶನಾದೊಡೇಂ ಕೃಪಾನ್ವಿತನಲ್ತೇ || || ೧೩೨ ||

ಭಾವ—ಆಮೇಲಾಮೇಲೆ?

ಪುರುಷ—ಆಮೇಲೆ ಒಂದು ದಿನ ಕೆಂಪು ಮೀನನ್ನು ತುಂಡುತುಂಡಾಗಿ ಕತ್ತರಿಸಿದೆನು. ಕೂಡಲೆ ಅದರ ಹೊಟ್ಟೆಯಲ್ಲಿ ರತ್ನಗಳಿಂದ ಹೊಳೆಯುವ ಈ ಉಂಗುರವನ್ನು ಕಂಡೆನು; ಆಮೇಲೆ ಇದನ್ನು ಮಾರುವುದಕ್ಕಾಗಿ ತೋರಿಸುತ್ತಿದ್ದ ನಾನು ಭಾವಮಿಶ್ರರಿಂದ ಹಿಡಿಯಲ್ಪಟ್ಟೆನು. ಹೊಡೆದರೂ ಹೊಡೆಯಿರಿ. ಬಿಟ್ಟರೂ ಬಿಡಿ. ಉಂಗುರ ಸೇರಿದ ಸಂಗತಿಯಂತೂ ಇದು.

ಭಾವ—ಜಾನುಕನೆ, ಇದರ ದುರ್ಗಂಧವನ್ನೂ ಘೋರವಾದ ಆಕೃತಿಯನ್ನೂ ನೋಡಿದರೆ, ಮೀನಿನ ಹೊಟ್ಟೆಯಲ್ಲಿದ್ದುದು ನಿಜ; ಸಂದೇಹವಿಲ್ಲ. ಇವನು ಉಂಗುರವನ್ನು ಕಂಡ ಸಂಗತಿ ವಿಮರ್ಶೆ ಮಾಡತಕ್ಕುದಾಗಿದೆ, ಆದ್ದರಿಂದ ರಾಜಸದನಕ್ಕೆ ಹೋಗುವೆನು.

ಕಾವಲುಗಾರರು—ಹಾಗಾದರೆ, ಎಲಾ ಗಂಟುಕತ್ತರಿಸುವನೆ, ನಡೆ. (ಎಂದು ಎಲ್ಲರೂ ಹೊರಡುವರು)

ಭಾವ—ಎಲೈ ಸೂಚಕನೆ, ಇವನನ್ನು ಊರಬಾಗಿಲಲ್ಲಿ ಎಚ್ಚರದಿಂದ ಕಾದಿರಿ. ನಾನು ಈ ಉಂಗುರದ ಸಂಗತಿಯನ್ನು ಮಹಾರಾಜನಿಗೆ ತಿಳಿಸಿ ಇವನಿಗೆ ಮಾಡತಕ್ಕ ಶಿಕ್ಷೆಯನ್ನು ಪ್ರತೀಕ್ಷಿಸಿಕೊಂಡಿದ್ದು ಬರುವೆನು.

ಇಬ್ಬರೂ—ಭಾವನೆ, ಮಹಾರಾಜನ ಅನುಗ್ರಹಾರ್ಥವಾಗಿ ಹೋಗಿ ಬರಬೇಕು.

(ಭಾವನು ಹೊರಟುಹೋಗುವನು)

೧ ನೆಯವನು—ಎಲೈ ಜಾನುಕನೆ, ಭಾವನು ಹೋಗಿ ಬಹಳ ಹೊತ್ತಾಯಿತು. ಇನ್ನೂ ಬರಲಿಲ್ಲವಲ್ಲ?

೨ ನೆಯವನು—ಸಮಯವನ್ನು ಕಾದಲ್ಲವೇ ರಾಜನನ್ನು ಕಾಣುವುದು?

೧ ನೆಯವನು—ಎಲೈ ಜಾನುಕನೆ, ಕೊಲೆಗೆ ಗುರಿಯಾದಿವನ ಕುತ್ತಿಗೆಗೆ ಹೂವಿನ ಮಾಲೆಯನ್ನು ಹಾಕುವುದಕ್ಕೆ ನನ್ನ ಕೈಗಳು ಕುಣಿಯುತ್ತಿವೆ. (ಎಂದು ಕಳ್ಳನನ್ನು ತೋರಿಸುವನು)

ಪುರುಷ—ಮಾನ್ಯರು ಎಂಥಿಗೂ ನಿಷ್ಕಾರಣವಾಗಿ ಕೊಲ್ಲಲಾರರು.

೨ ನೆಯವನು—(ನೋಡಿ) ಇದೋ ನಮ್ಮ ಯಜಮಾನನು ರಾಜಾಜ್ಞೆಯನ್ನು ಪಡೆದು ಈ ಕಡೆಯೇ ನೋಡುತ್ತಿರುವನು. ಆದುದರಿಂದ ನೀನು ಹದ್ದಿನ ಪಾಲಾಗುವೆ, ಅಲ್ಲದಿದ್ದರೆ ನಾಯಿಯ ಮೋರೆಯನ್ನು ನೋಡುವೆ.

(ಭಾವನು ಪ್ರವೇಶಿಸಿ)

ಭಾವ—ಸೂಚಕನೆ, ಈ ಬಲೆಗಾರನನ್ನು ಬಿಡು; ಉಂಗುರ ಬಂದ ಸಂಗತಿ ಸರಿಯಾದುದು.

೧ ನೆಯವನು—ಆಜ್ಞೆಯಾದಂತಾಗಲಿ.

೨ ನೆಯವನು—ಇವನು ಯಮನ ಪಟ್ಟಣವನ್ನು ಹೊಕ್ಕು ಹಿಂದಿರುಗಿದನು. (ಎಂದು ಕಟ್ಟನ್ನು ಬಿಚ್ಚುವನು)

ಪುರುಷ—(ಭಾವನಿಗೆ ನಮಸ್ಕರಿಸಿ) ಸ್ವಾಮಿ, ನನ್ನ ಜೀವನ ನಿಮ್ಮದು.

ಭಾವ—ಇದೋ, ಮಹಾರಾಜನು ಉಂಗುರದ ಬೆಲೆಗೆ ತಕ್ಕ ದ್ರವ್ಯವನ್ನು ಪಾರಿತೋಷಿಕವಾಗಿ ಕೊಟ್ಟಿರುವನು. (ಎಂದು ಪುರುಷನಿಗೆ ದ್ರವ್ಯವನ್ನು ಕೊಡುವನು)

ಪುರುಷ—(ನಮಸ್ಕಾರಪೂರ್ವಕವಾಗಿ ತೆಗೆದುಕೊಂಡು) ಸ್ವಾಮಿ, ನಿಮ್ಮಿಂದ ನಾನು ಅನುಗ್ರಹಿಸಲ್ಪಟ್ಟೆನು.

ಸೂಚಕ—ಶೂಲದಿಂದ ಇಳಿದು ಆನೆಯ ಹೆಗಲಲ್ಲಿ ಕುಳ್ಳಿರಿಸಲ್ಪಟ್ಟ ಇವನು ತಾನೆ ಅನುಗ್ರಹಿಸಲ್ಪಟ್ಟವನು.

ಜಾನುಕ—ಎಲೈ ಭಾವನೆ, ಆ ಉಂಗುರವನ್ನು ನೋಡಿದುದರಿಂದ ಮಹಾರಾಜನಿಗೆ ಬಹಳ ಪ್ರೀತಿಯುಂಟಾಗಿರುವುದೆಂದು ಆ ಪಾರಿತೋಷಿಕವೇ ಹೇಳುವುದು.

ಭಾವ—ಆ ಉಂಗುರವು ರತ್ನಮಯವಾದುದೆಂದು ಮಹಾರಾಜನಿಗೆ ಪ್ರೀತಿಯುಂಟಾಗಲಿಲ್ಲ. ಆತನು ಸ್ವಭಾವಗಂಭೀರನಾದರೂ ಅದನ್ನು ನೋಡಿ ಸ್ವಲ್ಪಹೊತ್ತು ಕಣ್ಣಲ್ಲಿ ನೀರು ತಂದನು; ಅದರಿಂದ ಆತನಿಗೆ ಒಂದು ಇಷ್ಟಜನದ ನೆನಪು ಉಂಟಾಯಿತೆಂದೆಣಿಸುವೆನು.

ಸೂಚಕ—ಭಾವನಿಗಲ್ಲವೆ ರಾಜಸೇವೆ ಫಲಿಸಿದುದು!

ಜಾನುಕ—ಹಾಗೆನ್ನಬೇಡ, ಈ ವಿಶಾಂಗುಲಿಯಾದ ಅಂಬಿಗನಿಗೆ ಫಲಿಸಿತೆಂದು ಹೇಳು. (ಎಂದು ಪುರುಷನನ್ನು ಕೋಪದಿಂದ ನೋಡುವನು)

ಪುರುಷ—ಸ್ವಾಮಿ, ಈ ಹಣದಲ್ಲಿ ಅರ್ಧ ತಮ್ಮ ಹೂವಿನ ಬೆಲೆಗಾಗಲಿ.

ಜಾನುಕ—ಇದೀಗ ಒಪ್ಪತಕ್ಕುದು.

ಭಾವ—ಎಲೈ ಅಂಬಿಗನೆ, ಈಗಲೀಗ ನೀನು ನನಗೆ ಪರಮಮಿತ್ರನಾದೆ. ಮದ್ಯಸಾಕ್ಷಿಕವಾಗಿ ನಾವು ಕೆಳೆತನಕ್ಕೆ ಮೊದಲು ಮಾಡಬೇಕು. ಆದುದರಿಂದ ನಡೆ, ಮದ್ಯದ ಅಂಗಡಿಗೆ ಹೋಗೋಣ.

(ಎಂದೆಲ್ಲರೂ ಹೊರಟು ಹೋಗುವರು)

# ಷಷ್ಠಾಂಕಂ

೦

(ಸಾನುಮತಿಯೆಂಬ ಅಪ್ಸರಸ್ತ್ರೀಯು ವಿಮಾನದಿಂದ ಪ್ರವೇಶಿಸುವಳು)

ಸಾನುಮತಿ—ಸಾಧುಜನದ ಸ್ನಾನಕಾಲವೆಂದು ಒಬ್ಬೊಬ್ಬರಾಗಿ ಹೋಗಿ ಬರತಕ್ಕ ಅಪ್ಸರಸ್ತ್ರೀರ್ಥಸಾನ್ನಿಧ್ಯವನ್ನು ನಾನೂ ಹೊಕ್ಕುಬಂದುದಾಯಿತು. ಈಗ ಈ ರಾಜಋಷಿಯ ಸಂಗತಿಯನ್ನು ನನ್ನ ಕಣ್ಣಾರೆ ನೋಡುವೆನು; ಮೇನಕಾ ಸಂಬಂಧದಿಂದ ಶಕುಂತಳೆ ನನಗೆ ಶರೀರಪ್ರಾಯಳು; ಆ ಮೇನಕೆಯು ತನ್ನ ಮಗಳಿಗಾಗಿ ಮೊದಲೇ ನನಗೆ ಹೇಳಿರುವಳು. (ಎಂದು ಎಲ್ಲಾ ಕಡೆಯಲ್ಲಿಯೂ ನೋಡಿ) ಇದೇನು! ಉತ್ಸವಕಾಲದಲ್ಲಿಯೂ ಅರಮನೆಯಲ್ಲಿ ಉತ್ಸವಾರಂಭವಿಲ್ಲದಂತಿರುವುದು? ಧ್ಯಾನವಿಶೇಷದಿಂದ ಎಲ್ಲವನ್ನೂ ತಿಳಿಯುವ ಶಕ್ತಿ ನನಗುಂಟು; ಆದರೂ ಸಖಿಯ ವಿಶ್ವಾಸವು ಬಹುಮಾನಪಡಿಸತಕ್ಕದು. ಆಗಲಿ, ಈ ಉದ್ಯಾನಪಾಲಿನಿಯರ ಪಾರ್ಶ್ವದಲ್ಲಿ ತಿರಸ್ಕರಿಣೀವಿದ್ಯೆಯಿಂದ ಒಬ್ಬರಿಗೂ ಕಾಣಿಸದಂತೆ ಇದ್ದುಕೊಂಡು ನೋಡುವೆನು. (ಎಂದು ವಿಮಾನದಿಂದಿಳಿದು ಮರೆಯಾಗಿ ನಿಲ್ಲುವಳು)

(ಆಮೇಲೆ ಮಾವಿನ ಚಿಗುರನ್ನು ನೋಡುತ್ತಾ ಒಬ್ಬ ಚೇಟಿಯು ಬರುವಳು; ಮತ್ತೊಬ್ಬಳು ಅವಳ ಹಿಂದೆ ಬರುವಳು)

ಮೊದಲನೆಯವಳು—

*ಕಂದ || ಜೀವಂ ಮಧುಮಾಸಕೆ ತೋ
ಷಾವಹವಿದು ಕೋಕಿಲಕ್ಕೆ ಮೊರೆದೆರಗುವ ಭೃಂ |
ಗಾವಳಿಯಡಿಯಿಂ ನೆಗ್ಗಿದ
ಮಾವಿನ ಕೊನರಿದನೆ ಋತುಗೆ ಮಂಗಳಮೆಂಬೆಂ || ೧೩೩ ||

ಎರಡನೆಯವಳು—ಎಲೆ ಸಖಿ ಪರಭೃತಿಕೆ, ಇದೇನು ಒಬ್ಬಳೇ ಮಾತಾಡಿಕೊಳ್ಳುವೆ?

---

*ರಾಗ—ಮೋಹನ (ನೋಟು) ಛಾಪುತಾಳ.

ಮಾವಿನ ತಳಿರಿದು ನೋಡಲ್ಕೆ | ಜೀವಿತವಲೆ ಮಧುಮಾಸಕ್ಕೆ | ಏವೇಳುವೆ ನಾಂ ಕೋಗಿಲೆಗೆ | ತೀವಿದ ರಸವಾರೋಗಣೆಗೆ || ೧ || ಏನಿದು ನೀನೊರ್ವಳೆ ನಿಂದು | ಮಾನಿನಿ ಮಾತಾಡುವೆಯಿಂದು | ನೀನರಿ ಮಾವನು ಪರಭೃತಿಕೆ | ತಾನೀಕ್ಷಿಸೆ ಮುದವಲೆ ಮನಕೆ || ೨ || ಅಮಮಾ ಬಂದುದು ಮಧುಮಾಸಂ | ರಮಣಿಯ ಕೃತಹೃದಯೋಲ್ಲಾಸಂ || ಸಮಯವಿದಲೆ ಕೇಳ್ ಮಧುಕರಿಕೆ | ಕ್ರಮದಿಂ ಗಾನವ ಮಾಳ್ಪುದಕೆ || ೩ ||

ಮೊದಲನೆಯವಳು—ಎಲೆ ಮಧುಕರಿಕೆ, ಮಾವಿನ ಚಿಗುರನ್ನು ನೋಡಿ ಪರಭೃತಿಕೆಯು ಉನ್ಮತ್ತೆಯಾಗುವುದಿಲ್ಲವೆ ?

ಎರಡನೆಯವಳು—(ಸಂತೋಷದೊಡನೆ ಬೇಗನೆ ಸಮೀಪಕ್ಕೆ ಬಂದು) ಆಹ! ವಸಂತಮಾಸ ಬಂದಿತೇ ?

ಮೊದಲನೆಯವಳು—ಎಲೆ ಮಧುಕರಿಕೆ, ಈಗ ನಿನ್ನ ಮದಕರವಾದ ವಿಲಾಸ ಗಾನಕ್ಕೆ ಕಾಲವು.

ಎರಡನೆಯವಳು—ಎಲೆ ಸಖಿ, ಕಾಮದೇವನ ಪೂಜೆಗಾಗಿ ತುದಿಗಾಲಲ್ಲಿ ನಿಂತು ಚೂತಾಂಕುರವನ್ನು ಕೊಯ್ಯುವೆನು ; ಅದುವರೆಗೂ ನನ್ನನ್ನು ಹಿಡಿದುಕೊಂಡಿರು.

ಮೊದಲನೆಯವಳು—ಹಾಗಾದರೆ ಪೂಜಾಫಲದಲ್ಲಿ ನನಗೂ ಅರ್ಧ.

ಎರಡನೆಯವಳು—ಹೇಳದಿದ್ದರೂ ಬಂದೇ ಬರುವುದು ; ನಮಗೆ ಪ್ರಾಣ ಒಂದು ಶರೀರಗಳೆರಡು. (ಎಂದು ಸಖಿಯಿಂದ ಅವಲಂಬಿತಳಾಗಿ ಚೂತಾಂಕುರವನ್ನು ಕೊಯ್ಯುವಳು) ಓಹೋ ! ಈ ಮಾವಿನಮೊಗ್ಗು ಅರಳದಿದ್ದರೂ ತೊಟ್ಟನ್ನು ಮುರಿದುದರಿಂದ ಎಷ್ಟು ಮಗಮಗಿಸುತ್ತಿರುವುದು ! (ಕಪೋತಹಸ್ತದಿಂದ ಕೂಡಿ)

ಕಂದ || ಎಲೆ ಚೂತಾಂಕುರ ನಿನ್ನಂ
ಮಲರ್ವಿಲ್ಲಂ ತಳೆದ ಕಾಮದೇವಂಗಿತ್ತೆಂ |
ಸಲೆ ಮುಳಿದನಿಯರ ಗುರಿಗೊಂ
ಡಲರಂಬುಗಳೈದರಿಂದೆ ವೆಗ್ಗಳನೆಸಿಸಾ || ೧೩೪ ||

(ಎಂದು ಮಾವಿನ ಮೊಗ್ಗನ್ನು ಎಸೆಯುವಳು)

(ಅನಂತರ ಕೋಪದಿಂದ ತೆರೆಯನ್ನು ಹಾರಿಸಿಕೊಂಡು ಕಂಚುಕಿ ಬರುವನು)

ಕಂಚುಕಿ—ಬೇಡಬೇಡ. ಎಲೆ ಮುಗ್ಧೆ, ಮಹಾರಾಜನು ವಸಂತೋತ್ಸವವನ್ನು ನಿಲ್ಲಿಸಿರುವಾಗ ಏತಕ್ಕೆ ಈ ಮಾವಿನ ಮೊಗ್ಗನ್ನು ಕೊಯ್ಯುವುದಕ್ಕೆ ಉಪಕ್ರಮಿಸುವೆ ?

ಇಬ್ಬರೂ—(ಭಯಪಟ್ಟು) ಎಲೈ ಆರ್ಯನೆ, ಪ್ರಸನ್ನನಾಗಬೇಕು ; ನಾವು ಈ ಸಂಗತಿಯನ್ನರಿತವರಲ್ಲ.

ಕಂಚುಕಿ—ವಸಂತಕಾಲದ ವೃಕ್ಷಗಳೂ ಅವುಗಳನ್ನು ಆಶ್ರಯಿಸಿದ ಪಕ್ಷಿಗಳೂ ಕೂಡ ರಾಜಾಜ್ಞೆಯನ್ನು ಮೀರದಿರುವುವು ; ಹಾಗೆಯೇ ನರಿ—

ವೃತ್ತ || ಬೆರೆಯದು ಬಂಡಿನಿಂದೆ ಚಿರನಿರ್ಗತಮಾದೊಡಮಾಮ್ರಕೋರಕಂ
ಕುರವಕಮಿರ್ಪುದಂತೆ ಮುಕುಳಸ್ಥಿತಿಯಲ್ಲಿ ವಿಕಾಸಕಾಂತೊಡಂ |

ಒರೆ ಮಧುವುಂ ಸರಂದೆಗೆಯದಿರ್ಪುವು ಕೋಗಿಲೆಗಳ್ ನಿಷಂಗದಿಂ
ದರೆಯುಗಿದಂಬಸಂಜುತುಪಸಂಹರಿಪಂ ಸ್ಮರನೆಂದು ಶಂಕಿಪೆಂ ||೧೩೪||

ಸಾನುಮತಿ—ಈ ವಿಷಯದಲ್ಲಿ ಸಂದೇಹವಿಲ್ಲ; ಮಹಾಪ್ರಭಾವವುಳ್ಳವನಲ್ಲವೆ ರಾಜಋಷಿಯು!

ಮೊದಲನೆಯವಳು—ಎಲೈ ಆರ್ಯನೆ, ರಾಷ್ಟ್ರೀಯನಾದ ಮಿತ್ರಾವಸುವು ಮಹಾರಾಜನ ಸನ್ನಿಧಿಯಿಂದ ಇಲ್ಲಿಗೆ ನಮ್ಮನ್ನು ಕಳುಹಿಸಿ ಕೆಲವು ದಿವಸಗಳಾದುವು. ಇದೋ ಈ ಪ್ರಮದವನವನ್ನೆಲ್ಲಾ ಸಿಂಗರಿಸುತ್ತಿದ್ದೆವು. ಅದರಿಂದ ಈ ವೃತ್ತಾಂತವು ನಮಗೆ ತಿಳಿಯದು.

ಕಂಚುಕಿ—ಆಗಲಿ! ಇನ್ನು ಮೇಲಾದರೂ ಈ ಕಾರ್ಯಕ್ಕೆ ಪ್ರವರ್ತಿಸಬೇಡಿ.

ಇಬ್ಬರೂ—ಎಲೈ ಆರ್ಯನೆ, ನಮಗೊಂದು ಕುತೂಹಲವುಂಟು; ನಾವು ಕೇಳ ತಕ್ಕುದಾಗಿದ್ದರೆ ಹೇಳಬೇಕು; ಏತಕ್ಕೋಸ್ಕರ ಮಹಾರಾಜನು ವಸಂತೋತ್ಸವ ವನ್ನು ನಿಲ್ಲಿಸಿರುವನು?

ಸಾನುಮತಿ—ಉತ್ಸವಪ್ರಿಯರಲ್ಲವೆ ಮನುಷ್ಯರು? ಇದಕ್ಕೇನೋ ಪ್ರಬಲ ಕಾರಣವಿರಬಹುದು.

ಕಂಚುಕಿ—ಎಲ್ಲರೂ ತಿಳಿದಿರುವುದನ್ನು ನಿಮಗೇತಕ್ಕೆ ಹೇಳಬಾರದು? ಶಕುಂತಳೆ ಯನ್ನು ನಿರಾಕರಿಸಿದುದರಿಂದ ಉಂಟಾದ ಅಪವಾದವು ನಿಮ್ಮ ಕಿವಿಗೆ ಬೀಳಲಿಲ್ಲವೆ?

ಇಬ್ಬರೂ—ರಾಷ್ಟ್ರೀಯನ ಮೂಲಕವಾಗಿ ಮಹಾರಾಜನು ತನ್ನ ಉಂಗುರ ವನ್ನು ನೋಡಿದುದನ್ನು ಮಾತ್ರ ಕೇಳಿ ಬಲ್ಲೆವು.

ಕಂಚುಕಿ—ಹಾಗಾದರೆ ಇನ್ನು ಸ್ವಲ್ಪವೇ ನಿಮಗೆ ಹೇಳತಕ್ಕದ್ದು; ಮಹಾ ರಾಜನು ಆ ಉಂಗುರವನ್ನು ನೋಡಿದುದು ಮೊದಲಾಗಿ ಏಕಾಂತದಲ್ಲಿ ಶಕುಂತಳೆ ಯನ್ನು ವರಿಸಿದ ವಿಷಯವು ಸ್ಮೃತಿಗೆ ಬಂದು, "ಅಯ್ಯೋ ಅಜ್ಞಾನದಿಂದ ಧರ್ಮ ಪತ್ನಿಯನ್ನು ನಿರಾಕರಿಸಿದೆನಲ್ಲಾ" ಎಂದು ಪಶ್ಚಾತ್ತಾಪವನ್ನು ಹೊಂದಿರುವನು. ಹಾಗೆಯೇ ಸರಿ—

ವೃತ್ತ || ಎಳಸಂ ರಮ್ಯಪದಾರ್ಥಮಂ ಪ್ರಜೆಗಳಂ ಸಂಭಾವಿಸಂ ಮುನ್ನಿನಂ
ತೆ ಮ ತಳಲಿಂ ರಾತ್ರಿಯ ನೂಂಕುವಂ ಪೊರಳುತುಂ ಶಯ್ಯಾಂತದೊಳೆಚ್ಚರಿಂ|
ದಳಿಪಿಂ ತನ್ನಯ ರಾಣಿವಾಸದವರೊಳ್ ಮಾತಾಡುವಾಗಳ್ ಪೆಸರ್
ತಳೆಯಲ್ ಪಲ್ಲಟಮಂ ಸಮಂತೊಗೆದ ನಾಣಿಂ ಸುಮ್ಮನಿರ್ಪಂ ನೃಪಂ||

ಸಾನುಮತಿ—ನನಗಿದು ಪ್ರಿಯವಾದುದು.

ಕಂಚುಕಿ—ಮಹಾರಾಜನ ಈ ಮನೋವ್ಯಾಕುಲತೆಯಿಂದ ಉತ್ಸವವು ನಿರಾಕರಿಸಲ್ಪಟ್ಟಿರುವುದು.

ಇಬ್ಬರೂ—ಯುಕ್ತ. (ತೆರೆಯಲ್ಲಿ) ಎಲೈ ಮಹಾರಾಜನೆ, ದಯಮಾಡಬೇಕು, ದಯಮಾಡಬೇಕು.

ಕಂಚುಕಿ—(ಕಿವಿಗೊಟ್ಟು) ಓಹೋ! ಮಹಾರಾಜನು ಈ ಕಡೆಯೇ ಬರುತ್ತಿರುವನು; ನಿಮ್ಮ ಕೆಲಸಕ್ಕೆ ಹೋಗಿರಿ.

ಇಬ್ಬರೂ—ಹಾಗಾಗಲಿ. (ಎಂದು ಹೊರಟು ಹೋಗುವರು)

(ಆಮೇಲೆ ಪಶ್ಚಾತ್ತಾಪಕ್ಕೆ ತಕ್ಕ ಉಡಿಗೆ ತೊಡಿಗೆಗಳುಳ್ಳ ರಾಜನು ಪ್ರತೀಹಾರಿ ವಿದೂಷಕರೊಡನೆ ಬರುವನು)

ವಿದೂ—ಎಲೈ ಮಹಾರಾಜನೆ, ದಯಮಾಡಬೇಕು ದಯಮಾಡಬೇಕು.

ಕಂಚುಕಿ—(ರಾಜನನ್ನು ನೋಡಿ) ಆಹ! ಎಲ್ಲಾ ಅವಸ್ಥೆಗಳಲ್ಲಿಯೂ ಸೌಂದರ್ಯಶಾಲಿಗಳ ಆಕೃತಿಯು ರಮಣೀಯವಾದುದು; ಹಾಗೆಯೇ ಸರಿ.

೨. ವೃತ್ತ || ನಿಡುಸುಯ್ಯುಗಳ್ ತುಟಿಗೆಂಪನಿಲ್ಲೆನಿಸೆ ಚಿಂತಾಜಾಗರಂಬೆತ್ತು ಕ
ಣ್ಗಡೆ ಬೆಂಡೆಳ್ದಿರೆ ಮೆಯ್ಯೊಳಾನದಧಿಕಾಲಂಕಾರಮುಂ ಬೇಸರಿಂ |
ದೆಡಗಯ್ಯೊಳ್ ಪಿಡಿದಾಂತು ಪೊಂಗಡಗಮೊಂದಂ ಕಾರ್ಶ್ಯಮೊಂದಿರ್ದೊಡಂ
ಕಡೆದೊಳ್ಮಾಣಿಕದಂತೆ ರಂಜಿಪನಿವಂ ತೇಜೋನ್ವಿತಂ ಭೂಮಿಪಂ ||೧೩೭||

ಸಾನು—(ರಾಜನನ್ನು ನೋಡಿ) ಶಕುಂತಳೆಯು ತಿರಸ್ಕಾರದಿಂದ ಅವಮಾನಿತಳಾಗಿದ್ದರೂ ಈತನನ್ನು ಹಂಬಲಿಸುತ್ತ ಅಳಲುವುದು ಯುಕ್ತವೇ ಸರಿ.

ರಾಜಂ—(ಶಕುಂತಳೆಯ ನೆನಪಿಂದ ಜಡನಾಗಿ ನಡೆದು)

*ಕಂದ || ಹರಿಣಾಂಬಕೆ ಮತ್ಪ್ರಿಯೆ ಪರಿ
ಪರಿಯಿಂ ಬೋಧಿಸಿದೊಡಂ ಮಲಂಗಿದುದಾಗಳ್ |

---

* ರಾಗ—ಬೇಹಾಗ್. ಆದಿತಾಳ.

ಸೈರಿಸಲಾರೆ | ಮಿಾರಿದ ತಾಪವ || ಪ || ತರುಣಿಯು ತನ್ನನು | ವರಿಸಿದ ಗುರುತನು | ಒರೆದುದ ನಾಲಿಸಿ | ಸ್ಮರಿಸದೆ ಪೋದೆನು || ೧ || ಕರವಿಡಿದರಸಿಯ | ತೊರೆದನು ಪುರುಕುಲ | ದರಸನೆಂಬುದಕೆ ನಾಂ | ಗುರಿಯಾದೆನಕ್ಕಟ || ೨ || ಅಳಿಮನವಿದು ಪ್ರಿಯೆ | ತಿಳಿಸುವ ಕಾಲದಿ | ಮಲಗಿದುದೀಗತಾನಳಲ್ವುದ ಕೇಳ್ದುದು || ೩ ||

ಒರೆದಪೆನೇಸಂ ಹತಮನ
ಮುರೆ ತಾಂ ಪಂಬಲಿಸಿ ಮರುಗಲೆಳ್ದತ್ತೀಗಳ್ || ೧೩೮ ||

ಸಾನು—ಈತನು ಹೀಗೆ ಹಂಬಲಿಸುವುದು ದುಃಖಿತೆಯಾದ ಶಕುಂತಳೆಯ ಪುಣ್ಯವಲ್ಲವೆ ?

ಕಂಚುಕಿ—(ಸಮೀಪಕ್ಕೆ ಬಂದು) ಮಹಾರಾಜನಿಗೆ ವಿಜಯವಾಗಲಿ ! ಉಪವನ ಪ್ರದೇಶಗಳು ನಿರುಕಿಸಲ್ಪಟ್ಟುವು ; ಮಹಾರಾಜನು ಇಷ್ಟಾನುಸಾರವಾಗಿ ವಿನೋದ ಸ್ಥಾನದಲ್ಲಿ ಕುಳಿತುಕೊಳ್ಳಬೇಕು.

ವಿದೂಷಕ—(ಮರೆಯಲ್ಲಿ) ಪುನಃ ಶಕುಂತಳೆಯೆಂಬ ವ್ಯಾಧಿಯು ನಮ್ಮ ರಾಯನನ್ನು ಆಕ್ರಮಿಸಿತು ; ಇವನಿಗೆ ಏನು ಚಿಕಿತ್ಸೆ ಮಾಡಬೇಕೋ ನಾನು ಕಾಣೆ.

ರಾಜಂ—ಎಲೆ ವೇತ್ರವತಿ, ಬಹುದಿವಸಗಳಿಂದ ನಿದ್ರೆಯಿಲ್ಲದ ಕಾರಣ ಧರ್ಮಾಸನ ದಲ್ಲಿ ಕುಳಿತುಕೊಳ್ಳತಕ್ಕುದಲ್ಲ ; ನಡಿಸಿದ ಪೌರಕಾರ್ಯವನ್ನು ಪತ್ರಿಕಾಮುಖದಿಂದ ತಿಳಿಸುವಂತೆ ನಾವು ಹೇಳಿದೆವೆಂದು ಮಂತ್ರಿಗೆ ತಿಳಿಸು.

ಪ್ರತೀಹಾರಿ—ಮಹಾರಾಜನ ಆಜ್ಞೆಯಂತಾಗಲಿ. (ಎಂದು ಹೊರಟು ಹೋಗುವಳು)

ರಾಜಂ—ಎಲೈ ವಾತಾಯನನೆ, ನೀನೂ ನಿನ್ನ ಕಾರ್ಯವನ್ನು ನೋಡು.

ಕಂಚುಕಿ—ಹಾಗಾಗಲಿ. (ಎಂದು ಹೊರಟು ಹೋಗುವನು)

ವಿದೂ—ಈಗ ನೀನು ಒಂದು ನೊಣವೂ ಇಲ್ಲದಂತೆ ಮಾಡಿದೆ; ಇನ್ನು ಶೀತಲವಾಗಿಯೂ, ತಾಪಹರವಾಗಿಯೂ, ರಮಣೀಯವಾಗಿಯೂ ಇರುವ ಈ ಉಪವನದೇಶದಲ್ಲಿ ಕುಳಿತು ನಿನ್ನ ಮನಸ್ಸನ್ನು ಸಂತೋಷಪಡಿಸುವನಾಗು.

ರಾಜಂ—ಎಲೈ ಸ್ನೇಹಿತನೆ, "ರಂಧ್ರೋಪಪಾತಿನೋಽನರ್ಥಾಃ" ಎಂಬ ಮಾತು ತಪ್ಪತಕ್ಕುದಲ್ಲ. ಏತಕ್ಕೆಂದರೆ—

ಕಂದ || ಅಂದು ಮುನಿಪುತ್ರಿಯುಂ ನಲ
ವಿಂದಾನೇಕಾಂತದಲ್ಲಿ ವರಿಸಿದ ನೆನಪುಂ |
ಒಂದುದು ಮನಕೊಡನಿಸುವಾ
ಕಂದರ್ಪನ ಕರಕೆ ಚೂತಪಲ್ಲವಶರಮುಂ || ೧೩೯ ||

ವಿದೂ—ತಾಳು, ಈ ದಂಡಕಾಷ್ಠದಿಂದ ಮನ್ಮಥವ್ಯಾಧನನ್ನು ನಾಶಮಾಡು ವೆನು. (ಎಂದು ದಂಡವನ್ನು ಎತ್ತಿ ಮಾವಿನ ಚಿಗುರನ್ನು ಕೆಡಹುವುದಕ್ಕೆ ಹೋಗುವನು)

ರಾಜಂ—(ನಕ್ಕು) ಆಗಲಿ; ಬ್ರಾಹ್ಮಣರ ಪರಾಕ್ರಮವನ್ನು ನೋಡಿದು ದಾಯಿತು. ಎಲೈ ಮಿತ್ರನೆ, ಎಲ್ಲಿ ಕುಳಿತು ನನ್ನ ಪ್ರಿಯೆಯನ್ನು ಸ್ವಲ್ಪ ಹೋಲು ತ್ತಿರುವ ಲತೆಗಳಲ್ಲಿ ದೃಷ್ಟಿಯನ್ನಿಟ್ಟು ವಿನೋದಪಡಿಸಲಿ ?

ವಿದೂ—"ಮಾಧವೀ ಮಂಟಪದಲ್ಲಿ ಈ ವೇಳೆಯನ್ನು ಕಳೆಯುವೆನು. ಅಲ್ಲಿಗೆ ನನ್ನ ಕಯ್ಯಿಂದ ಬರೆದ ಪೂಜ್ಯಳಾದ ಶಕುಂತಳೆಯ ಭಾವಚಿತ್ರವನ್ನು ತೆಗೆದು ಕೊಂಡು ಬಾ" ಎಂದು ನಮ್ಮ ಖಿದ ಪರಿಚಾರಿಣಿಯಾದ ಚತುರಿಕೆಗೆ ನೀನು ಆಜ್ಞಾಪಿಸಿ ಇರುವೆಯಷ್ಟೆ.

ರಾಜಂ—ಅದೇ ಈಗ ಮನಸ್ಸನ್ನು ವಿನೋದಪಡಿಸತಕ್ಕದ್ದು; ಆದುದರಿಂದ ಆ ಮಾಧವೀಮಂಟಪದ ಮಾರ್ಗವನ್ನು ತೋರಿಸು.

ವಿದೂ—ಎಲೈ ಪೂಜ್ಯನೆ, ಇತ್ತಿತ್ತ ಬರಬೇಕು.

(ಇಬ್ಬರೂ ಹೋಗುವರು. ಸಾನುಮತಿಯೂ ಸಂಗಡ ಹೋಗುವಳು.)

ಇದೋ—ರತ್ನದ ಹಾಸರೆಯಿಂದ ಕೂಡಿದ ಮಾಧವೀಮಂಟಪವು ಭೋಗ್ಯ ವಸ್ತುಗಳಿಂದ ಮನೋಹರವಾಗಿರುವ ಕಾರಣ ನಿಜವಾಗಿ ಕುಶಲಪ್ರಶ್ನಪೂರ್ವಕ ವಾಗಿ ನಮ್ಮನ್ನು ಪತಿಕರಿಸುವಂತಿದೆ; ಆದಕಾರಣ ಅಲ್ಲಿಗೆ ಹೋಗಿ ಕುಳಿತು ಕೊಳ್ಳೋಣ, ನಡೆ.

ಇಬ್ಬರೂ—(ಪ್ರವೇಶವನ್ನು ಅಭಿನಯಿಸಿ ಕುಳಿತುಕೊಳ್ಳುವರು)

ಸಾನು—ಈ ಲತೆಯ ಸಮೀಪದಲ್ಲಿ ಇದ್ದು ಸಖಿಯ ಭಾವಚಿತ್ರವನ್ನು ನೋಡು ವೆನು; ಆಮೇಲೆ ತನ್ನ ಪತಿಗಿರುವ ಬಹಳವಾದ ಅನುರಾಗವನ್ನು ಆಕೆಗೆ ತಿಳಿಸುವೆನು. (ಎಂದು ಲತೆಯ ಸಮೀಪದಲ್ಲಿ ನಿಲ್ಲುವಳು)

ರಾಜಂ—ಎಲೈ ಮಿತ್ರನೆ, ಶಕುಂತಳೆಯ ಪೂರ್ವವೃತ್ತಾಂತವನ್ನೆಲ್ಲಾ ಈಗ ಸ್ಮರಿಸುವೆನು; ನಿನಗೂ ಹೇಳಿದ್ದೆನು. ತಿಳಿದಿದ್ದ ನೀನು ಆಕೆಯನ್ನು ನಾನು ನಿರಾ ಕರಿಸುವ ಕಾಲದಲ್ಲಿ ನನ್ನ ಸಮೀಪಕ್ಕೂ ಬಾರದೆ ಹೋದೆ; ಮೊದಲು ಯಾವಾಗಲೂ ಪೂಜ್ಯಳಾದ ಆ ಶಕುಂತಳೆಯ ಹೆಸರನ್ನೂ ನೀನು ಕೊಂಡಾಡಲಿಲ್ಲ. ಇದೇನು ? ನನ್ನ ಹಾಗೆಯೇ ನೀನೂ ಮರೆದೆಯಲ್ಲಾ !

ವಿದೂ—ನಾನು ಮರೆಯಲಿಲ್ಲ; ಆದರೆ ಎಲ್ಲವನ್ನೂ ಹೇಳಿ ಕೊನೆಗೆ 'ಇದು ಪರಿಹಾಸೋಕ್ತಿಯೇ ಹೊರತು ನಿಜವಲ್ಲ' ಎಂದು ನೀನು ಹೇಳಿದುದರಿಂದ ಮಣ್ಣಿನ ಮುದ್ದೆಯಂತೆ ಬುದ್ಧಿಯುಳ್ಳ ನಾನು ಹಾಗೆಯೇ ಗ್ರಹಿಸಿದೆನು. ಬರುವ ಕಷ್ಟಸುಖ ಗಳನ್ನು ಯಾರು ತಾನೆ ಮೀರಬಲ್ಲರು ?

ಸಾನು—ಹಾಗೆಯೇ ಸರಿ.

ರಾಜಂ—(ನೆನೆದು) ಎಲೈ ಮಿತ್ರನೆ, ನನ್ನನ್ನು ರಕ್ಷಿಸು.

ವಿದೂ—ಎಲೈ ಇದೇನು! ಹೀಗೆ ದುಃಖಿಸುವುದು ನಿನಗೆ ತಕ್ಕುದಲ್ಲ. ಸತ್ಪುರುಷರು ಎಂದಿಗೂ ದುಃಖಕ್ಕೆ ಈಡಾಗುವುದಿಲ್ಲ; ಬಿರುಗಾಳಿ ಬೀಸಿದರೂ ಪರ್ವತಗಳು ಅಲ್ಲಾಡದಿರುವುವಲ್ಲವೆ?

ರಾಜಂ—ಎಲೈ ಮಿತ್ರನೆ, ನಿಷ್ಕಾರಣವಾಗಿ ನಾನು ನಿರಾಕರಿಸಿದುದರಿಂದ ದುಃಖಿತೆಯಾದ ಪ್ರಿಯೆಯ ಅವಸ್ಥೆಯನ್ನು ನೆನೆದು ರಕ್ಷಕರಿಲ್ಲವೆಂದು ಕಳವಳಿಸಿದೆನು.

†ವೃತ್ತ || ಎನ್ನಿಂ ಧಿಕ್ಕೃತೆಯಾಗಿ ತನ್ನ ಜನಮುಂ ಬೆನ್ನಂಟಲುದ್ಯುಕ್ತೆಯು
ಶ್ಲೋ. ೮ ಪ್ಪನ್ನಂ ನಿಲ್ಲೆಲೆಗೇ ಎನುತ್ತೆ ಗುರುಶಿಷ್ಯಂ ಕೋಪದಿಂ ಗರ್ಜಿಸಲ್ |
ಬನ್ನಂಬೊಂದುತೆ ಮತ್ತಮಳ್ ಕವಿಯೆ ಬಾಷ್ಪಂ ಕಣ್ಗಳೊಳ್ ಕ್ರೂರನಾ
ದೆನ್ನಲ್ಲಿಟ್ಟವಲೋಕನಂ ವಿಷದ ಮುಳ್ಳಂತೆನ್ನ ತಾಂ ಚುರ್ಚುಗುಂ ||

ನಾನು—ಆಹ! ಸ್ವಕಾರ್ಯಪರತ್ವವೆಂಬುದು ಹೀಗೆ ತಾನೆ. ಈತನ ಸಂತಾಪದಿಂದ ನಾನು ಸಂತಪಪಡುವೆನು.

ವಿದೂ—ಎಲೈ ಯಾರೋ ಒಬ್ಬ ಖೇಚರನು ಪೂಜ್ಯಳಾದ ಆಕೆಯನ್ನು ತೆಗೆದುಕೊಂಡೊಯ್ದನೆಂದು ಊಹಿಸುವೆನು.

ರಾಜಂ—ಪತಿವ್ರತೆಯನ್ನು ಮುಟ್ಟುವುದಕ್ಕೆ ಯಾವನು ತಾನೇ ಶಕ್ತನಾದಾನು? ನಿನ್ನ ಸಖಿಗೆ ಮೇನಕೆಯು ಜನನಿಯೆಂದು ಕೇಳಿ ಬಲ್ಲೆನು; ಯಾರೋ ಆಕೆಯ ಸಹಚಾರಿಣಿಯರು ಅವಳನ್ನು ಕೊಂಡೊಯ್ದರೆಂದು ನನ್ನ ಮನಸ್ಸು ಶಂಕಿಸುವುದು.

ನಾನು—ಜ್ಞಾನಕ್ಕಿಂತಲೂ ಅಜ್ಞಾನವು ಆಶ್ಚರ್ಯವನ್ನುಂಟುಮಾಡತಕ್ಕುದಾಗಿದೆ!

ವಿದೂ—ನೀನು ಹೇಳಿದಂತೆ ಆಗಿದ್ದರೆ ಆಕೆಯ ಸಮಾಗಮವು ನಿನಗೆ ಕಾಲದಲ್ಲೇ ಸಿದ್ಧಿಸುವುದು.

ರಾಜಂ—ಅದು ಹೇಗೆ?

---

†ರಾಗ—ಭೈರವಿ. ರೂಪಕತಾಳ.

ಎಂತು ಮರೆಯುವೆನು| ಕಾಂತೆಯನು ನಾ| ನೆಂತು ಮರೆಯುವೆನು ||ಪ|| ಅಂತಾಕೆ ದುಃಖವ| ನಾಂತು ಪೋದನುವ ನಾ| ನೆಂತು ಮರೆಯುವೆನು ||ಅ|| ಧಿಕ್ಕರಿಸಿದೊಡೆ| ಋಷಿ ಶಿಷ್ಯನ| ಪಕ್ಕವ ಸೇರೆ| ಅವ ಹುಬ್ಬ ಗಂ| ಟಿಕ್ಕುತ ಗಜರೆ| ಮನದಲ್ಲಿ ತಾಂ| ದುಕ್ಕಿಸುತಿರರೆ| ಅಕ್ಕಟ ಕಣ್ಣೀ| ರ್ಮಿಕ್ಕುಳಿಸುತಲೆನ್ನ|| ದಿಕ್ಕಿಲ್ಲದವಳಂತೆ| ದಿಟ್ಟಿಸಿದುದನು ನಾ| ನೆಂತು ಮರೆಯುವೆನು ||೧||

ವಿದೂ—ತಂದೆತಾಯಿಗಳು ಪತಿಯನ್ನು ಅಗಲಿ ದುಃಖಿಸುವ ಮಗಳನ್ನು ಬಹು ಕಾಲ ನೋಡಿ ಸೈರಿಸುವರೆ ?

ರಾಜಂ—ಎಲೈ ಸ್ನೇಹಿತನೆ,

ಕಂದ || ಕನಸೋ ಭ್ರಮೆಯೋ ಮಾಯೆಯೊ
ಕೊನೆಗಂಡುದೊ ಪುಣ್ಯಮನಿತೆ ಫಲದಿಂ ಪೇಣೆ |
ನ್ನನುಗೊಳಲದೆ ಸಂದುದು ಮ
ನ್ಮನೋರಥಂಗಳ ಪೊಸಲ್ಗೆ ತೀರಮೆ ಇಲ್ಲಂ || ೧೪೧ ||

ವಿದೂ—ಹೀಗೆನ್ನಬೇಡ ; ಮುಂದೆ ಆಕೆಯ ಸಮಾಗಮವು ತಪ್ಪದೆ ಆಗುವುದೆಂಬುದಕ್ಕೆ ಈ ಉಂಗುರವೇ ನಿದರ್ಶನವಲ್ಲವೆ ?

ರಾಜಂ—(ಉಂಗುರವನ್ನು ನೋಡಿ) ಅಯ್ಯೋ ! ಸುಲಭವಲ್ಲದ ಸ್ಥಾನವನ್ನು ಹೊಂದಿ ಜಾರಿದುದರಿಂದ ಈ ಉಂಗುರವು ದುಃಖಪಡಿಸತಕ್ಕುದಾಗಿದೆ.

*ಕಂದ|| ಪರಿಭಾವಿಪೆನೆನ್ನವೊಲಿಂ
ಗುರ ನಿನ್ನಂ ಫಲದಿನಲ್ಪಪುಣ್ಯಮೆನುತ್ತುಂ |
ಹರಿಣಾಕ್ಷಿಯರುಣನಖಭಾ
ಸುರಮಾದಂಗುಳಿಯ ಸೇರಿ ಜಾರಿದ ಕತದಿಂ || ೧೪೨ ||

ಸಾನು—ನಿಜ ; ಇದು ಪರಹಸ್ತವನ್ನು ಸೇರಿದ್ದರೆ ದುಃಖಪಡಿಸತಕ್ಕುದಾಗುತ್ತಿತ್ತು.

ವಿದೂ—ಎಲೈ ಮಹಾರಾಜನೆ, ಯಾವ ಉದ್ದೇಶದಿಂದ ಈ ಉಂಗುರವು ಆಕೆಯ ಹಸ್ತವನ್ನು ಹೊಂದಿಸಲ್ಪಟ್ಟಿತ್ತು ?

ಸಾನುಮತಿ—ನನಗೂ ಇದನ್ನು ತಿಳಿಯಬೇಕೆಂಬ ಕುತೂಹಲವುಂಟು.

ರಾಜಂ—ಕೇಳು; ಇನ್ನೆಷ್ಟು ಕಾಲ ವಿಳಂಬವಾಗಿ ನಿನ್ನ ಪ್ರಾಪ್ತಿಯನ್ನುಂಟು ಮಾಡುವೆಯೆಂದು ನಾನು ಪಟ್ಟಣಕ್ಕೆ ಹೊರಟ ಕಾಲದಲ್ಲಿ ಪ್ರಿಯೆ ಕಣ್ಣೀರಿಂದ ಕೂಡಿ ಕೇಳಿದಳು.

---

*ರಾಗ—ಕಮಾಚು (ಹಿಂದುಸ್ಥಾನಿ). ಚಾಪುತಾಳ.

ಉಂಗುರವೇ ಉಳಿವರೆ ಪ್ರಿಯೆ | ಯಂಗುಲಿಯನು ನೀ | ನುಂಗುರವೆ || ಪ || ಅಳಿಕುಂತಳೆಯಾದ ಶಕುಂ | ತಳೆಯ ಸೇರ್ದರೂ || ಉಳಿದೆವಲ್ಪಪುಣ್ಯರು ನಾ | ವಿಳೆಯೊಳಿರ್ವರು || ೧ || ನೀರೆಯ ನುಣ್ಬೆರಳೆಡೆಯನು | ಸೇರಿ ಪುಣ್ಯದಿ || ಜಾರುತೆಂತು ಮುಳುಗಿದೆ ನೀಂ | ನೀರೊಳಕ್ಕಟಾ || ಉಂಗು || ೨ || ಏಕಿನ್ನಾಡಲಿ ನಿನ್ನ ವಿ | ವೇಕಿಯಾಗಿ ನಾಂ ಸ್ವೀಕರಿಸಿದರ್ದಾಕೆಯನು ನಿ || ರಾಕರಿಸಿದಮೇ | ಲುಂಗುರವೆ || ೩ ||

ವಿದೂ—ಆಮೇಲಾಮೇಲೆ ?

ರಾಜಂ—ಆಮೇಲೆ ಈ ಮುದ್ರಿಕೆಯನ್ನು ನಾನು ಆಕೆಯ ಬೆರಳಲ್ಲಿಟ್ಟು ಹಿ
ಹೇಳಿದೆನು :

ಕಂದ || ಅನುದಿನವೊಂದೊಂದಾಗೆಣಿ
ಸಿನಿಯಳೆ ಮನ್ನಾಮದಕ್ಷರಂಗಳ ಕೊನೆಸಾ |
ರ್ವನಿತರೊಳೆರ್ಕಂ ನಿನ್ನಯ
ಸನಿಯದೊಳೆನ್ನಂತವುರವನೊಂದಿಪ್ಪ ಜನಂ || ೧೪೩

ಹೇಳಿದುದನ್ನು ಕ್ರೂರನಾದ ನಾನು ಅಜ್ಞಾನದಿಂದ ನಡಿಸದೆ ಹೋದೆನು.

ಸಾನು—ಗಡುವಾದರೂ ರಮಣೀಯವಾದುದು. ಅದನ್ನು ವಿಧಿಯು ತಪ್ಪಿಸಿ

ವಿದೂ—ಈ ಉಂಗುರವು ಅಂಬಿಗನು ಕತ್ತರಿಸಿದ ಕೆಂಪುಮೀನಿನ ಹೊಟ್ಟೆಯ
ದ್ದುದು ಹೇಗೆ ?

ರಾಜಂ—ನಿನ್ನ ಸಖಿಯು ಶಚೀತೀರ್ಥವನ್ನು ವಂದಿಸುವಾಗ ಬೆರಳಿಂದ ಜ
ಗಂಗಾಪ್ರವಾಹದಲ್ಲಿ ಬಿತ್ತು.

ವಿದೂ—ಯುಕ್ತ.

ಸಾನು—ಆದುದರಿಂದ ದುಃಖಿತೆಯಾದ ಶಕುಂತಳೆಯಲ್ಲಿ ಅಧರ್ಮಭೀರುವ
ಈ ರಾಜಋಷಿಗೆ ಮದುವೆಯಲ್ಲಿ ಸಂದೇಹವುಂಟಾಯಿತು ; ಅಥವಾ ಇಂ
ಅನುರಾಗಕ್ಕೆ ಗುರುತನ್ನು ಅಪೇಕ್ಷಿಸುವ ನಿಮಿತ್ತವೇನು ? ಹೇಗಿರುವುದೋ !

ರಾಜಂ—ನಾನಾದರೋ ಈ ಉಂಗುರವನ್ನು ನಿಂದಿಸುವೆನು.

ವಿದೂ—(ತನ್ನಲ್ಲಿ ತಾನು) ಈತನು ಉನ್ಮತ್ತನ ದಾರಿಯನ್ನು ಹಿಡಿದನು.

ರಾಜಂ—ಕಂದ|| ನಳನಳಿಪ ಬೆರಳ್ಗಳಿಂದಂ
ತೊಳಪಾ ಕಯ್ಯುಳಿದದೆಂತು ಮುಳುಗಿದೆ ನೀರೊಳ್ |

ಅಥವಾ,

ಪಳಿಯೆನಚೇತನವೆಂದಿದ
ನೆಳೆಯಳ ಕೈವಿಡಿದು ನಾನೆ ತೊರೆದುದರಿಂದಂ || ೧೪೪

ವಿದೂ—(ತನ್ನಲ್ಲಿ ತಾನು) ನನ್ನನ್ನಾದರೋ ಹಸಿವು ಕಿತ್ತುಕೊಂಡು ತಿನ್ನುವುದ

ರಾಜಂ—ನಿಷ್ಕಾರಣವಾಗಿ ಬಿಟ್ಟೆನಲ್ಲಾ ಎಂದು ಪ್ರಿಯೆಯಲ್ಲಿ ಪಶ್ಚಾತ್ತಾ
ದಿಂದ ತಪ್ತನಾದ ನನ್ನ ವಿಷಯದಲ್ಲಿ ದಯೆಯಿಟ್ಟು ಪುನಶ್ಚ ದರ್ಶನವನ
ಕೊಡು.

(ಅನಂತರ ಚತುರಿಕೆ ಚಿತ್ರಪಟವನ್ನು ತೆಗೆದುಕೊಂಡು ತೆರೆಯನ್ನು ಹಾರಿಸಿಕೊಂಡು ಬರುವಳು)

ಚತುರಿಕೆ—ಎಲೈ ಮಹಾರಾಜನೆ, ಇದೊ ಶಕುಂತಳೆಯ ಭಾವಚಿತ್ರವು. (ಎಂದು ಚಿತ್ರಪಟವನ್ನು ತೋರಿಸುವಳು)

ವಿದೂ—ಭಾಪು! ಮಿತ್ರನೆ, ಭಾಪು! ಈ ಭಾವಚಿತ್ರವು ಮಧುರಸ್ಥಿತಿಯಿಂದ ನೋಡತಕ್ಕುದಾಗಿದೆ. ಇದರ ಹಳ್ಳತಿಟ್ಟಾದ ಪ್ರದೇಶಗಳಲ್ಲಿ ನನ್ನ ದೃಷ್ಟಿಯು ಎಡಹುವಹಾಗಿದೆ.

ಸಾನುಮತಿ—ಅಹ! ಈ ರಾಜಋಷಿಯ ಚಿತ್ರಕಲಾಕುಶಲತೆಯು ಆಶ್ಚರ್ಯ ಕರವಾದುದು. ನನ್ನ ಸಖಿಯನ್ನು ನನ್ನ ಮುಂದೆಯೇ ಇರುವಂತೆ ಭಾವಿಸುವೆನು.

ರಾಜಂ—ಕಂದ || ಎಂತೆಂತು ತಿದ್ದವೇಳ್ಕುಮ
ದಂತಂತುಟು ಚಿತ್ರದಲ್ಲಿ ತಿದ್ದಲ್ ಒರ್ಕುಂ |
ಅಂತಾದೊಡಮಿಾ ಚಿತ್ರದೆ
ಕಾಂತೆಯ ಲಾವಣ್ಯಮಿನಿಸೆ ಸಂಗಡಿಸಿರ್ಕುಂ || ೧೪೫ ||

ಸಾನು—ಪಶ್ಚಾತ್ತಾಪದಿಂದ ಹೆಚ್ಚಾಗಿರುವ ಇವನ ಸ್ನೇಹಕ್ಕೂ ನಿರಹಂ ಕಾರಕ್ಕೂ ಇವನು ಆಡಿದ್ದು ಸರಿಯಾದದ್ದು.

ವಿದೂ—ಎಲೈ ಮಿತ್ರನೆ, ಇಲ್ಲಿ ಮೂವರು ಉತ್ತಮಸ್ತ್ರೀಯರು ಕಾಣುವರು; ಇವರೆಲ್ಲರೂ ನೋಡುವುದಕ್ಕೆ ಚೆನ್ನಾಗಿರುವರು; ಇವರಲ್ಲಿ ಪೂಜ್ಯಳಾದ ಶಕುಂತಳೆ ಯಾರು?

ಸಾನು—ನನ್ನ ಸಖಿಯ ರೂಪವನ್ನು ಇವನು ಅರಿತವನೇ ಅಲ್ಲ. ಇವನ ಕಣ್ಣುಗಳು ಹುಟ್ಟಿದುದು ವ್ಯರ್ಥ.

ರಾಜಂ—ಇವರಲ್ಲಿ ಶಕುಂತಳೆ ಯಾರು? ನೀನೇ ಹೇಳು.

ವಿದೂ—ಇದೋ ಸಡಿಲಿದ ಎಣೆಗಂಟಿನ ದೆಸೆಯಿಂದ ಜಾರಿದ ಕುಸುಮಗಳುಳ್ಳ ಮುಡಿಯಿಂದಲೂ, ಹೊಮ್ಮಿದ ಬೆವರಿನ ಹನಿಗಳುಳ್ಳ ಮುಖದಿಂದಲೂ, ಆಯಾಸ ದಿಂದ ನೀಡಿರುವ ಬಾಹುಗಳಿಂದಲೂ ಕೂಡಿ ಜಲಸೇಚನೆಯಿಂದ ಮನೋಹರ ವಾದ ಎಳೆಯ ಚಿಗುರುಗಳುಳ್ಳ ಮಾವಿನಮರದ ಪಕ್ಕದಲ್ಲಿ ಸ್ವಲ್ಪ ಬಳಲಿದವಳಂತೆ ಬರೆಯಲ್ಪಟ್ಟಿರುವ ಈಕೆ ಪೂಜ್ಯಳಾದ ಶಕುಂತಳೆ. ಉಳಿದವರು ಸಖಿಯರೆಂದು ಊಹಿಸುವೆನು.

ರಾಜಂ—ನೀನು ನಿಪುಣನು; ಇಲ್ಲಿ ನನ್ನ ಭಾವಚಿಹ್ನೆ ಇರುವುದು ನೋಡು.

*ಕಂದ || ಬರೆದೀ ಚಿತ್ರದೆ ಬೆಮರಿದ
ಬೆರಳಿಟ್ಟೆಡೆ ಮಲಿಸವಾಗಿ ಕಾಣ್ಬುದು ಕದಪಿಂ |
ದುರುಳಿದ ಕಂಬನಿ ಬಣ್ಣಂ
ಪರೆದಿಪ್ಪುದರಿಂ ವಿಭಾವಿಸಲ್ಕೆಡೆಯೆನಿಕುಂ || ೧೪೬ ||

ಎಲೆ ಚತುರಿಕೆ, ವಿನೋದಾಸ್ಪದವಾದ ಈ ಚಿತ್ರವು ಅರ್ಧ ಬರೆಯಲ್ಪಟ್ಟಿದೆ. ಆದುದರಿಂದ ನಡೆ, ಬಣ್ಣಿಗೆಯನ್ನು ತೆಗೆದುಕೊಂಡು ಬಾ.

ಚತುರಿಕೆ—ಎಲೈ ಪೂಜ್ಯನಾದ ಮಾಢವ್ಯನೆ, ನಾನು ಬಣ್ಣದ ಪೆಟ್ಟಿಗೆಯನ್ನು ತರುವವರೆಗೂ ಈ ಚಿತ್ರಪಟವನ್ನು ಹಿಡಿದಿರು.

ರಾಜಂ—ನಾನೇ ಇದನ್ನು ಹಿಡಿದಿರುವೆನು. (ಎಂದು ಚಿತ್ರಪಟವನ್ನು ತೆಗೆದು ಕೊಳ್ಳುವನು)

(ಚತುರಿಕೆ ಹೊರಟು ಹೋಗುವಳು)

ಕಂದ || ಬಳಿಗೈತಂದಿನಿಯಳನಂ
ದುಳಿದೀಬರೆದವಳನಿಂದು ಬಹುಮತಿಸುವ ನಾಂ |
ಪೊಳೆಯಂ ದಾಂಟಿ ಬಳಿಕ್ಕಂ
ಕೆಳೆಯನೆ ಬಯಸಿದಪೆನಕಟ ಮೃಗತೃಷ್ಣಿಕೆಯಂ || ೧೪೭ ||

ವಿದೂ—(ತನ್ನಲ್ಲಿ ತಾನು) ನಿಜ, ಈತನು ಹೊಳೆಯನ್ನು ದಾಟಿ ಮೃಗತೃಷ್ಣಿಕೆ ಯನ್ನು ಬಯಸಿದನು. (ಪ್ರಕಾಶವಾಗಿ) ಎಲೈ ಮಿತ್ರನೆ, ಇಲ್ಲಿ ಬರೆಯತಕ್ಕದ್ದು ಇನ್ನು ಬೇರೆ ಏನಿರುವುದು ?

ಸಾನು—ಯಾವ ಯಾವ ಸ್ಥಾನವು ನನ್ನ ಸಖಿಗೆ ಬೇಕಾದುದೋ ಆಯಾ ಸ್ಥಾನವನ್ನು ಬರೆಯುವುದಕ್ಕೆ ಬಯಸಿರಬಹುದು.

ರಾಜಂ—

ವೃತ್ತ || ಮರಲೊಳಗಾಡುವಂಚೆಗಳಿನೊಪ್ಪುವ ಮಾಲಿನಿಯಂ ಮೃಗಾಳಿ ಪ
ಟ್ಟಿರೆ ಕರಮೊಪ್ಪುತಿರ್ಪ ತುಹಿನಾದ್ರಿಯ ತಪ್ಪಲನಾರ್ದ್ರವಲ್ಕಬಂ |

---

ರಾಗ—ಘರ್ಜು. ಆದಿತಾಳ.

**ಪರಿಕಿಸಿ ನೋಡೈ ನಿಜಸಖಿಯಾ || ಪ || ಕರದಿ ನಾನೇ ಬರೆದಿಹ ಶಶಿಮುಖಿಯಾ | ಸಖಿಯಾ || ಅನು || ಕರೆಯಿದು ಬೆವರಿದ | ಬೆರಳನು ನಾನಿ | ಲ್ಲಿರಿಸಿದಕಾರಣ | ಮೆರೆವುದು ತಿಳಿಯಾ | ಸಖಿಯಾ || ಪರಿಕಿಸಿ || ೧ || ಬರೆಪದೆ ಬಣ್ಣವು | ಪರೆಯೆ ಕಪೋಲದಿಂ | ದುರುಳಿದ ಕಂಬನಿ | ಗುರುತಿದೊ ತಿಳಿಯಾ ಸಖಿಯಾ || ಪರಿಕಿಸಿ || ೨ || ಬರೆವಾಗೆನ್ನಯ | ಕರಕಂಪನದಿಂ |ಗೆರೆಯಿದು ವಕ್ರವಾ | ಗಿರುವುದು ತಿಳಿಯಾ | ಸಖಿಯಾ || ಪರಿಕಿಸಿ || ೩ ||**

ಧುರತರುಮೂಲದೊಳ್ ಹರಿಣಶೃಂಗದೆ ತನ್ನಯ ವಾಮನೇತ್ರಮಂ
ತುರಿಸುತುಮಿರ್ಪ ಪೆಣ್ಮಿಗಮುಮಂ ಬರೆಯಲ್ಕಿದರಲ್ಲಿ ವಾಂಛಿಪೆಂ ||

ವಿದೂ—(ತನ್ನಲ್ಲಿ ತಾನು) ಹಾಗಾದರೆ ಈತನು ಈ ಚಿತ್ರಪಟದಲ್ಲಿ ಜೋಲು ಗಡ್ಡದ ಋಷಿಗಳ ಗುಂಪನ್ನು ಬರೆದು ಮುಗಿಸಬೇಕು.

ರಾಜಂ—ಎಲೈ ಮಿತ್ರನೆ, ನಾನು ಶಕುಂತಳೆಯ ಮತ್ತೊಂದು ಅಲಂಕಾರವನ್ನು ಬರೆಯಬೇಕೆಂದಿದ್ದು ಮರೆದೆನು.

ವಿದೂ—ಅದೇನು ?

ಸಾನು—ವನವಾಸಕ್ಕೂ ಕೋಮಲತ್ವಕ್ಕೂ ಯಾವುದು ತಕ್ಕದೋ ಅದು.

ರಾಜಂ—

೧ ವೃತ್ತ || ತೊಳಪ ಕದಂಪಿನೋಳೆಳಲುತೊಪ್ಪಿರೆ ಕೇಸರಮುಳ್ಳರಲ್ದು ಕಂ
ಗೊಳಿಪ ಶಿರೀಷವೃಂತಮನೊಡರ್ಚಿದುದಿಲ್ಲ ಕೊಡಂಕೆಯಲ್ಲಿ ಮೇಣ್ |
ವಿಳಸಿತಶಾರದೇಂದುರುಚಿಕೋಮಳಬಾಳಮೃಣಾಳಸೂತ್ರಮಂ
ಕಳಶಕುಚಾಂತರಸ್ಥಲದೊಳಾಗಿಸಲಿಲ್ಲ ಕುರಂಗನೇತ್ರೆಯಾ || ೧೪೯ ||

ವಿದೂ—ಎಲೈ, ಇದೇನು ಪೂಜ್ಯಳಾದ ಶಕುಂತಳೆಯು ಕೆಂದಾವರೆಯ ಎಸಳಂತೆ ಶೋಭಿಸುವ ತನ್ನ ಹಸ್ತಾಗ್ರದಿಂದ ಮುಖವನ್ನು ಮುಚ್ಚಿಕೊಂಡು ಅತಿ ಭೀತಳಾದಂತಿರುವಳು ? (ಚೆನ್ನಾಗಿ ನೋಡಿ) ಅಹ ! ಪುಷ್ಪಾಸವವನ್ನು ಕಳುವ ತೊತ್ತಿನ ಕೂಸಾದ ಈ ದುರುದುಂಬಿ ತುಂಬಿಯು ಪೂಜ್ಯಳಾದ ಈಕೆಯ ಮುಖಕ್ಕೆ ಎರಗುವುದು.

ರಾಜಂ—ಈ ದುಷ್ಟಭೃಂಗವನ್ನು ಅಟ್ಟು.

ವಿದೂ—ದುಷ್ಟಶಿಕ್ಷಕನಾದ ನೀನು ತಾನೇ ಇದನ್ನು ಅಟ್ಟುವುದಕ್ಕೆ ಸಮರ್ಥನು.

ರಾಜಂ—ಯುಕ್ತ. ಎಲೈ ಕುಸುಮಲತೆಗಳಿಗೆ ಪ್ರಿಯವಾದ ಅತಿಥಿಯೆ, ಏತಕ್ಕೋಸ್ಕರ ಇಲ್ಲಿ ಬಿದ್ದು ದುಃಖವನ್ನು ಅನುಭವಿಸುವೆ?

ಕಂದ || ಕುಸುಮದೊಳಿರ್ಪೀ ಮಧುಕರಿ
ಪಸಿದುಂ ಪಾರ್ದಪುದು ನಿನ್ನನನುರಕ್ತತೆಯಿಂ |
ದೆಸಕಮಿಗೆ ಮಧುರತರಮಧು
ರಸವಂ ಪೋ ನಿನ್ನನುಳಿದು ಸೇವಿಸದಲ್ತೇ || ೧೫೦ ||

ನಾನು—ಈಗ ಇದು ವಿನಯದೊಡನೆ ನಿವಾರಿಸಲ್ಪಟ್ಟಿತಲ್ಲವೆ ?

ವಿದೂ—ಈ ಜಾತಿ ಎಷ್ಟು ಅಟ್ಟಿದರೂ ಹೋಗತಕ್ಕದಲ್ಲ ; ಬಹುಕೆಟ್ಟದ್ದು.

ರಾಜಂ—ಹಾಗೋ ! ಎಲೆ ತುಂಬಿಯೆ, ಸಮ್ರಾಜ್ಞಿಯಂತೆ ನೀನು ನಡೆಯುವುದಿಲ್ಲವೆ ? ಹಾಗಾದರೆ ಕೇಳು :

ವೃತ್ತ || ನೋಯಿಸದಿರ್ಪ ಬಾಲತರುಪಲ್ಲವದಂತೆ ಮನೋಜ್ಞವಾದ ಮು
೮೨ ತ್ಪ್ರೇಯಸಿಯಿಂಪುವೆತ್ತ ತುಟಿಯಂ ದಯೆಯಿಂದಮೆ ಪೀರ್ದೆನಲ್ತೆ ವು |
ಷ್ಪಾಯುಧಕೇಳಿಯೊಳೆಲೆ ಮಧುವ್ರತ ನೀನದ ನೋಂಕೆ ನಿನ್ನ ಕೇಳ್
ತೋಯಜಗರ್ಭವೆಂದೆನಿಪ ಬಂಧನಮಂದಿರಕಿಂದು ಸೇರಿಪೆಂ || ೧೫೧ ||

ವಿದೂ—ಇಂತಹ ಕ್ರೂರಶಿಕ್ಷೆಗೆ ಭಯಪಡದೆ ಇದ್ದೀತೆ! (ನಕ್ಕು, ತನ್ನಲ್ಲಿ ತಾನು) ಈತನು ಈಗ ಉನ್ಮತ್ತನಾದನು ; ನಾನು ಕೂಡ ಈತನ ಸಹವಾಸದಿಂದ ಈ ತೆರನಾದೆನು. (ಪ್ರಕಾಶವಾಗಿ) ಎಲೈ ಇದು ಚಿತ್ರವಲ್ಲವೇ ?

ರಾಜಂ—ಏನು ?

ನಾನು—ನಾನು ಕೂಡ ಈ ವರೆಗೂ ಚಿತ್ರವೆಂದು ತಿಳಿದಿರಲಿಲ್ಲ; ಇನ್ನು ಬರೆದುದನ್ನು ಸಾಕ್ಷಾತ್ತಾಗಿ ಅನುಭವಿಸತಕ್ಕ ಈತನ ವಿಚಾರವನ್ನು ಹೇಳತಕ್ಕದ್ದೇನು ?

ರಾಜಂ—ಇದೇನು ? ತಪ್ಪು ಹಿಡಿಯುವ ನಿನ್ನ ಗುಣವನ್ನು ತೋರಿಸಿದೆ !

ಕಂದ || ಇನಿಯಳ್ ನಿಜವೆನ್ನುತೆ ದ
ರ್ಶನಸುಖಮಂ ತನ್ಮಯತೆಯನೊಂದಿದ ಮನದಿಂ |
ದನುಭವಿಪೆನಗವಳಂ ನೀಂ
ನೆನವಿತ್ತೀಂ ಮಗುಳ್ದು ಚಿತ್ರಗತೆಯಂ ಗೈದೈ || ೧೫೨ ||

(ಎಂದು ಕಣ್ಣೀರನ್ನು ಬಿಡುವನು)

ನಾನು—ಪೂರ್ವಾಪರವಿರೋಧಿಯಾದ ಈ ವಿಧಾನಮಾರ್ಗವು ಅಪೂರ್ವವಾದುದು !

ರಾಜಂ—ಎಲೈ ಮಿತ್ರನೆ, ವಿಶ್ರಾಂತಿಯಿಲ್ಲದ ದುಃಖವನ್ನು ಹೇಗೆ ಅನುಭವಿಸಲಿ ?

ಕಂದ || ಕನಸಿನೊಳವಳಂ ಕೂಡುವೆ
ನೆನೆ ಬಾರದು ನಿದ್ರೆ ಚಿತ್ರಗತೆಯಾದಳುಮಂ |
ಮನವಾರೆ ನೋಳ್ಪೆನೆನೆ ಕಂ
ಬನಿಯೆಡೆಗುಡದಿರ್ಪುದಿನ್ನದೇಗೈದಪೆನಾಂ || ೧೫೩ ||

ಸಾನು—ಎಲೈ ಮಿತ್ರನೇ, ಶಕುಂತಳೆಯ ನಿರಾಕರಣೆಯಿಂದ ಉಂಟಾಗಿದ್ದ ದುಃಖವನ್ನು ಸರ್ವಪ್ರಕಾರದಿಂದಲೂ ಹೋಗಲಾಡಿಸಿದೆ.

(ಚತುರಿಕೆ ಪ್ರವೇಶಿಸಿ)

ಚತುರಿಕೆ—ಎಲೈ ಮಹಾರಾಜನೆ, ಜಯಶೀಲನಾಗು! ಜಯಶೀಲನಾಗು! ಬಣ್ಣದ ಪೆಟ್ಟಿಗೆಯನ್ನು ತೆಗೆದುಕೊಂಡು ಈ ಕಡೆಗೆ ಹೊರಟಿದ್ದೆನು.

ರಾಜಂ—ಆಮೇಲೆ ?

ಚತುರಿಕೆ—ತರಳಿಕೆಯೊಡನೆ ಬರುತ್ತಿದ್ದ ವಸುಮತೀದೇವಿಯು ಅದನ್ನು ನಾನೇ ಆರ್ಯಪುತ್ರನ ಸಮೀಪಕ್ಕೆ ತೆಗೆದುಕೊಂಡು ಹೋಗುವೆನೆಂದು ಮಧ್ಯಮಾರ್ಗದಲ್ಲಿ ನನ್ನ ಕೈಯಿಂದ ತೆಗೆದುಕೊಂಡಳು.

ವಿದೂ—ದೈವಯೋಗದಿಂದ ನೀನು ತಪ್ಪಿಸಿಕೊಂಡು ಬಂದೆ!

ಚತುರಿಕೆ—ಮರದ ಕೊಂಬೆಗೆ ತಗುಲಿದ ದೇವಿಯ ಮೇಲುಮುಸುಕನ್ನು ತರಳಿಕೆಯು ಬಿಡಿಸುವುದರೊಳಗೆ ನಾನು ತಪ್ಪಿಸಿಕೊಂಡು ಬಂದೆನು.

ರಾಜಂ—ದೇವಿ ಬರುವಳು; ಆಕೆ ಬಹಳ ಮಾನಗರ್ವಿತೆ; ನೀನು ಈ ಚಿತ್ರಪಟವನ್ನು ರಕ್ಷಿಸಿಕೊ.

ವಿದೂ—ಚಿತ್ರಪಟವನ್ನು ರಕ್ಷಿಸಿಕೊ ಎನ್ನುವುದಿರಲಿ; ನಿನ್ನನ್ನು ರಕ್ಷಿಸಿಕೋ ಎನ್ನು. (ಎಂದು ಚಿತ್ರಪಟವನ್ನು ತೆಗೆದುಕೊಂಡು ಎದ್ದು) ನೀನು ದೇವಿಯ ಕಲಹದಿಂದ ಬಿಡುಗಡೆಯನ್ನು ಹೊಂದಿದರೆ ಆಮೇಲೆ ಮೇಘಪ್ರತಿಚ್ಛಂದವೆಂಬ ಉಪ್ಪರಿಗೆಯಲ್ಲಿರುವ ನನ್ನನ್ನು ಕೂಗು. (ಎಂದು ಓಡಿಹೋಗುವನು)

ಸಾನು—ಈತನು ಮತ್ತೊಬ್ಬಳಲ್ಲಿ ಮನಸ್ಸುಳ್ಳವನಾದರೂ ಮೊದಲನೆಯವಳ ಪುರಸ್ಕಾರವನ್ನು ಇಚ್ಛೈಸುವನು. ಆದುದರಿಂದ ಇವನ ಮೈತ್ರಿಯು ಸ್ಥಿರವಾದದ್ದು.

(ಕೈಯಲ್ಲಿ ಕಾಗದವನ್ನು ಹಿಡಿದುಕೊಂಡು ಪ್ರತೀಹಾರಿ ಬರುವಳು)

ಪ್ರತೀಹಾರಿ—ಮಹಾರಾಜನೆ, ಜಯಶೀಲನಾಗು! ಜಯಶೀಲನಾಗು!

ರಾಜಂ—ಎಲೆ ವೇತ್ರವತಿ, ನೀನು ಬರುವಾಗ ಮಧ್ಯಮಾರ್ಗದಲ್ಲಿ ದೇವಿಯನ್ನು ಕಾಣಲಿಲ್ಲವೆ ?

ಪ್ರತೀಹಾರಿ—ಕಂಡೆನು; ರಾಣಿಯು ಕಾಗದವನ್ನು ಹಿಡಿದಿದ್ದ ನನ್ನನ್ನು ನೋಡಿ ಹಿಂದಿರುಗಿದಳು.

ರಾಜಂ—ಕಾರ್ಯಜ್ಞಳು ನನ್ನ ಕಾರ್ಯಕ್ಕೆ ತಡೆಯನ್ನು ಮಾಡಳು.

ಪ್ರತೀಹಾರಿ—ಎಲೈ ಮಹಾರಾಜನೆ, ದ್ರವ್ಯಸಮೂಹದ ಗಣನಾಬಾಹುಳ್ಯದಿಂದ ನಾಗರಿಕನ ಒಂದೇ ಕಾರ್ಯವನ್ನು ನೋಡಿದೆನು; ಕಾಗದದಲ್ಲಿ ಬರೆದಿರುವ ಆ ವಿಷಯ ವನ್ನು ಮಹಾರಾಜನು ಅವಲೋಕಿಸಬೇಕು—ಎಂದು ಮಂತ್ರಿಯು ವಿಜ್ಞಾಪಿಸುತ್ತಾನೆ.

ರಾಜಂ—ಪತ್ರಿಕೆಯನ್ನು ಈಕಡೆ ತೋರಿಸು. (ಪ್ರತೀಹಾರಿ ತೋರಿಸುವಳು) (ಓದಿಕೊಂಡು) ಏನು, ಸಮುದ್ರವ್ಯವಹಾರಿಯಾದ ಧನಮಿತ್ರನೆಂಬ ವಣಿಜನು ಹಡಗು ಮುಳುಗಿ ವಿಪತ್ತನ್ನು ಹೊಂದಿದನು; ಈತನು ಪುತ್ರವಂತನಲ್ಲ; ಮತ್ತು ದುಃಖಿತನು. ಅವನ ದ್ರವ್ಯವೆಲ್ಲಾ ಅರಸನಿಗೆ ಸೇರತಕ್ಕದ್ದೆಂದು ಮಂತ್ರಿಯು ಬರೆದಿರುವನು. ಮಕ್ಕಳಿಲ್ಲದ್ದು ಕಷ್ಟವಲ್ಲವೆ? ಎಲೆ ವೇತ್ರವತಿ, ಆ ವಣಿಜನು ಧನಿಕನಾದ ಕಾರಣ ಬಹುಮಂದಿ ಪತ್ನಿಯರಿರಬೇಕು; ಆತನ ಪತ್ನಿಯರಲ್ಲಿ ಯಾವಳಾದರೂ ಒಬ್ಬಳು ಗರ್ಭಿಣಿಯಾಗಿದ್ದರೆ ವಿಚಾರಿಸು.

ಪ್ರತೀ—ಎಲೈ ಮಹಾರಾಜನೆ, ಸಾಕೇತಸೆಟ್ಟಿಯ ಮಗಳಾದ ಅವನ ಹೆಂಡತಿಗೆ ಈಗ ಪುಂಸವನಕರ್ಮ ನಡೆದಿರುವುದೆಂದು ಕೇಳಿರುವೆನು.

ರಾಜಂ—ತಂದೆಯ ದ್ರವ್ಯಕ್ಕೆ ಗರ್ಭಕ್ಕೂ ಬಾಧ್ಯತೆಯುಂಟಲ್ಲವೆ? ನಡೆ, ಈ ಮಾತನ್ನು ಅಮಾತ್ಯನಿಗೆ ಹೇಳು.

ಪ್ರತೀ—ಮಹಾರಾಜನ ಆಜ್ಞೆಯಾದಂತೆ. (ಎಂದು ಹೊರಡುವಳು)

ರಾಜಂ—ಎಲೆ ವೇತ್ರವತಿ, ಇಲ್ಲಿ ಬಾ.

ಪ್ರತೀ—ಇದೋ ಬಂದೆನು.

ರಾಜಂ—ಸಂತತಿ ಉಂಟು, ಇಲ್ಲ, ಎಂಬುದರಿಂದೇನು?

ಕಂದ ‖ ಜನರಾವಾವ ಸುಬಾಂಧವ
ಜನಮನಗಲ್ದಿರ್ಪುದವರ್ಗೆ ಪಾಪಂ ಪೆರಗಂ।
ದೆನಿಸಿರಲಾಯಾಬಾಂಧವ
ನೆನಿಪಂ ದುಷ್ಯಂತನೆಂದು ಸಾರುಗೆ ಪುರದೊಳ್ ‖ ‖ ೧೫೪ ‖

ಪ್ರತೀ—ಹೀಗೆ ತಾನೆ ಸಾರತಕ್ಕದ್ದು? (ಎಂದು ಹೊರಟುಹೋಗಿ ಪುನಃ ಪ್ರವೇಶಿಸಿ) ಕಾಲದಲ್ಲಿ ಬಂದ ಮಳೆಯಂತೆ ಸ್ವಾಮಿಯ ಆಜ್ಞೆಯನ್ನು ಅಮಾತ್ಯನು ಕೊಂಡಾಡಿದನು.

ರಾಜಂ—(ನಿಟ್ಟುಸಿರನ್ನು ಬಿಟ್ಟು) ಎಲಾ, ಹೀಗೆ ಸಂತತಿಯಿಲ್ಲದ ಕುಲಗಳ ಸಂಪತ್ತುಗಳು ಮೂಲಪುರುಷರ ಅವಸಾನದಲ್ಲಿ ಅನ್ಯರನ್ನು ಸೇರುವುವು! ನನ್ನ ಪುರುವಂಶದ ಸಂಪತ್ತಿಗೂ ಕೊನೆಗೆ ಇದೇ ಗತಿ ತಾನೆ!

ಪ್ರತೀ—ಅಮಂಗಳ ಪರಿಹಾರವಾಗಲಿ!

ರಾಜಂ—ಕೈಸೇರಿದ ಶ್ರೇಯಸ್ಸನ್ನು ತಿರಸ್ಕರಿಸಿದ ನನ್ನನ್ನು ನಿಂದಿಸು.

ಸಾನು—ಸಂಶಯವಿಲ್ಲ, ಶಕುಂತಳೆಯನ್ನೇ ಮನಸ್ಸಿನಲ್ಲಿ ಇಟ್ಟುಕೊಂಡು ಈತನು ತನ್ನನ್ನು ನಿಂದಿಸಿಕೊಂಡನು.

ರಾಜಂ—

*ಕಂದ || ಸಮಯದೊಳೆ ಬಿತ್ತಿ ಬೀಜವ
ನಮಿತಫಲಂಗುಡುವ ಪೊಲಸನುಳಿಯುವ ತೆರದಿಂ।
ದಮಮ ಬಸಿರಾಂತ ಮತ್ಕುಲ
ಸಮೃದ್ಧಿಕಾರಣೆಯ ಧರ್ಮಪತ್ನಿಯನುಳಿದೆಂ || ೧೫೫ ||

ಸಾನು—ನಿನ್ನ ಸಂತತಿಯು ಈಗ ಅವಿಚ್ಛಿನ್ನವಾಗುವುದು.

ಚತುರಿಕೆ—(ಮರೆಯಲ್ಲಿ) ಅಯ್ಯೋ! ಈ ವಣಿಜನ ವೃತ್ತಾಂತದಿಂದ ನಮ್ಮ ಮಹಾರಾಜನ ದುಃಖವು ದ್ವಿಗುಣಿತವಾಯಿತು. ಈತನನ್ನು ಸಂತೈಸುವುದಕ್ಕೆ ಮೇಘ ಪ್ರತಿಚ್ಛಂದವೆಂಬ ಉಪ್ಪರಿಗೆಯಿಂದ ಆರ್ಯನಾದ ಮಾಢವ್ಯನನ್ನು ಕರೆದುಕೊಂಡುಬಾ.

ಪ್ರತೀ—ಚೆನ್ನಾಗಿ ಹೇಳಿದೆ. (ಎಂದು ಹೊರಟು ಹೋಗುವಳು)

ರಾಜಂ—ಆಹ! ದುಷ್ಯಂತನ ಪಿತೃಗಳು ಸಂದೇಹಗ್ರಸ್ತರಾದರು. ಏಕೆಂದರೆ—

ಕಂದ || ಕುಂಬಿನಿಯೊಳೆಮ್ಮ ಕುಲದೆ ತಿ
ಲಾಂಬುವ ಮುಂದಕಟ ಕುಡುವನಾವನೆನುತ್ತುಂ।
ನಾಂ ಬಿಡೆ ಪುತ್ರವಿಹೀನಂ
ಕಂಬನಿದೊಳೆದುಳಿದ ಜಲವ ಪಿತೃಗಳ್ ಪೀರ್ವರ್ || ೧೫೬ ||

(ಹೀಗೆಂದು ಮೂರ್ಛೆಯನ್ನು ಹೊಂದುವನು)

ಚತು—(ತ್ವರೆಯಿಂದ ಹಿಡಿದುಕೊಂಡು) ಎಲೈ ಮಹಾರಾಜನೆ, ಸಂತೈಸಿಕೊಳ್ಳ ಬೇಕು, ಸಂತೈಸಿಕೊಳ್ಳಬೇಕು.

---

*ರಾಗ—ಆನಂದಭೈರವಿ. ರೂಪಕತಾಳ.

**ಫಲವೇನಿನ್ನು | ಹಲುಬಿದರಕಟನಾಂ ಒಂದೇ ಚಿತ್ತದೊಳು ||ಪ|| ಬಳಿಗೆ ತಾನೈತಂದ| ಕುಲವೃದ್ಧಿಹೇತುವಾ| ದಳಿಕುಂತಳೆಯನು ನಾಂ| ತಿಳಿಯದುಳಿದವೇಲೆ ||ಅ|| ಬಿತ್ತಿ ಬೀಜವ ಕಾಲದಿ ಫಲವೀವ| ಹೊಲನನಿರದುಳಿವ| ಮತ್ತನಂದದಿ ಮುದ| ವೆತ್ತು ಕೂಡಿದ ಸತಿ| ಹೊತ್ತು ಗರ್ಭವ ಬರೆ| ಗೊತ್ತರಿಯದವೇಲೆ ||೧||**

ಸಾನು—ಹಾಹಾ! ತೆಗೆತೆಗೆ! ದೀಪವಿದ್ದರೂ ಮರೆಯ ದೋಷದಿಂದ ಅಂಧಕಾರವನ್ನು ಅನುಭವಿಸುವನು. ನಾನು ಈಗಲೇ ಇವನನ್ನು ಸಂತುಷ್ಟನನ್ನಾಗಿ ಮಾಡುವೆನು; ಅಥವಾ ಹವಿರ್ಭಾಗದಲ್ಲಿ ಆಸಕ್ತರಾದ ದೇವತೆಗಳು ಶೀಘ್ರವಾಗಿ ಧರ್ಮಪತ್ನಿಯಾದ ನಿನ್ನನ್ನು ನಿನ್ನ ಗಂಡನು ಸಂತೋಷಪಡಿಸುವಂತೆ ಮಾಡುವರೆಂದು ಶಕುಂತಳೆಯನ್ನು ಸಂತೈಸುತ್ತಿರುವ ಇಂದ್ರಜನನಿಯ ಮುಖದಿಂದ ಕೇಳಿರುವೆನು. ಆದುದರಿಂದ ಆವರೆಗೂ ಸುಮ್ಮನಿರುವುದೇ ಯುಕ್ತ. ಈ ಮಹಾರಾಜನ ವೃತ್ತಾಂತವನ್ನು ತಿಳಿಸಿ ಪ್ರಿಯಸಖಿಯಾದ ಶಕುಂತಳೆಯನ್ನು ಸಂತೈಸುವೆನು. (ಎಂದು ವ್ಯೋಮಯಾನದಿಂದ ಹೊರಟು ಹೋಗುವಳು)

(ತೆರೆಯಲ್ಲಿ)

ಬದುಕಿಸು! ಬದುಕಿಸು!

ರಾಜಂ—(ಮೂರ್ಛೆಯನ್ನು ತಿಳಿದು ಕಿವಿಗೊಟ್ಟು) ಓಹೋ! ಮಾಢವ್ಯನ ದೀನಧ್ವನಿಯಂತಿರುವುದು! ಯಾರಲ್ಲಿ?

(ಪ್ರತೀಹಾರಿ ತ್ವರೆಯಿಂದ ಬಂದು)

ಪ್ರತೀಹಾರಿ—ಉಳಿಯುವುದರಲ್ಲಿ ಸಂಶಯಾಸ್ಪದನಾದ ಮಿತ್ರನನ್ನು ರಕ್ಷಿಸು, ರಕ್ಷಿಸು!

ರಾಜಂ—ಮಾಣವಕನನ್ನು ಪರಾಭವಿಸಿದವರು ಯಾರು?

ಪ್ರತಿ—ಕಾಣಿಸಿಕೊಳ್ಳದ ಯಾವುದೋ ಒಂದು ಭೂತವು ಹಿಡಿದುಕೊಂಡು ಮೇಘಪ್ರತಿಚ್ಛಂದವೆಂಬ ಉಪ್ಪರಿಗೆಯ ಮೇಲಕ್ಕೆ ತೆಗೆದುಕೊಂಡು ಹೋಯಿತು.

ರಾಜಂ—ಹೀಗೆನ್ನಬೇಡ, ನನ್ನ ಮನೆಯಲ್ಲಿಯೂ ಭೂತಗಳ ಕಾಟವುಂಟೆ? ಅಥವಾ—

ಕಂದ || ತಿಳಿಯಲ್ ನಿಜಪ್ರಮಾದ
ಸ್ಖಲಿತಮನೇ ಶಕ್ಯಮಲ್ಲಮನುದಿನಮೆನಲಿ|
ನ್ನುಳಿದವರದಾವ ಪಥದೊಳ್
ಚಲಿಸುವರೆಂಬುದನೆ ತಿಳಿಯೆ ಶಕ್ತನದಾವಂ || ೧೫೭ ||

(ತೆರೆಯಲ್ಲಿ)

ಹಾ! ಮಿತ್ರನೆ, ಬದುಕಿಸು! ಬದುಕಿಸು! ಹೇಗೆತಾನೆ ಭಯಪಡದೆ ಇರಲಿ! ಇವನಾವನೋ ಒಬ್ಬನು ನನ್ನ ಕತ್ತನ್ನು ಬಗ್ಗಿಸಿಕೊಂಡು ಕಬ್ಬಿನ ಕೋಲನ್ನು ಮುರಿಯುವಂತೆ ಮುರಿಯುವನು.

ರಾಜಂ—(ಅತ್ತಿತ್ತ ನೋಡಿ) ಧನುಸ್ಸೆಲ್ಲಿ?

(ಯವನಿಕೆ ಧನುಸ್ಸನ್ನು ತೆಗೆದುಕೊಂಡು ಬಂದು)

ಯವನಿಕೆ—ಎಲೈ ಮಹಾರಾಜನೆ, ಇದೋ, ಅಂಗುಲಿತ್ರಾಣದೊಡನೆ ಕೂಡಿದ ಧನುಸ್ಸನ್ನು ತಂದಿರುವೆನು.

(ರಾಜನು ಬಾಣಸಮೇತವಾದ ಧನುಸ್ಸನ್ನು ತೆಗೆದುಕೊಳ್ಳುವನು)

(ತೆರೆಯಲ್ಲಿ)

ಕಂದ || ಗಳಶೋಣಿತಕೆಳಸಿದ ಪೆ
ರ್ಬುಲಿ ಪಶುವಂ ಮುರಿಯುವಂತೆ ಮುರಿಯುವೆ ನಿನ್ನಂ |
ಸಲಹುಗೆಯಾರ್ತರ ಭಯಮಂ
ತೊಲಗಿಸೆ ಕಾರ್ಮುಕವನಾಂತ ದುಷ್ಯಂತನೃಪಂ || ೧೫೮ ||

ರಾಜಂ—(ಕೋಪಗೊಂಡು) ಇದೇನು! ನನ್ನ ಹೆಸರನ್ನೆತ್ತಿ ಆಡುವನು. ರಾಕ್ಷಸಾಧಮನೆ, ನಿಲ್ಲು! ನಿಲ್ಲು! ಇನ್ನು ನಿನ್ನ ಕೊಬ್ಬನ್ನು ಮುರಿಯುವೆನು. (ಎಂದು ಧನುಸ್ಸನ್ನು ಎತ್ತಿ) ಎಲೆ ವೇತ್ರವತಿ, ಸೋಪಾನಮಾರ್ಗವನ್ನು ತೋರಿಸು.

ವೇತ್ರವತಿ—ಎಲೈ ಮಹಾರಾಜನೆ, ಇತ್ತಿತ್ತ ದಯಮಾಡಬೇಕು.

(ಎಲ್ಲರೂ ಬೇಗನೆ ಸಂಗಡ ಹೋಗುವರು)

ರಾಜಂ—(ಎಲ್ಲಾ ಕಡೆಯಲ್ಲೂ ನೋಡಿ) ಈ ಉಪ್ಪರಿಗೆಯಲ್ಲಿ ಯಾರೂ ಇಲ್ಲವಲ್ಲಾ!

(ತೆರೆಯಲ್ಲಿ)

ಬದುಕಿಸು! ಬದುಕಿಸು! ನೀನು ನನಗೆ ಕಾಣಿಸುವೆ, ನನ್ನನ್ನು ನೀನು ಕಾಣೆ; ಬೆಕ್ಕಿನ ಬಾಯಿಗೆ ಸಿಕ್ಕಿದ ಇಲಿಯಂತೆ ನಾನು ಬದುಕುವುದರಲ್ಲಿ ಆಶೆಯನ್ನು ತೊರೆದೆನು.

ರಾಜಂ—ಎಲಾ ತಿರಸ್ಕರಿಣೀಗರ್ವಿತನೆ, ನನ್ನ ಅಸ್ತ್ರವು ನಿನ್ನನ್ನು ಕಾಣುವುದು; ಈಗ ನಿಲ್ಲು; ಆ ಅಸ್ತ್ರವನ್ನು ತೊಡುವೆನು, ಯಾವ ಅಸ್ತ್ರವು

ಕಂದ || ಕೊಲುವುದೊ ವಧ್ಯನೆ ನಿನ್ನಂ
ಸಲಹುವುದೋ ರಕ್ಷಣೀಯನಾದಾದ್ವಿಜನಂ |
ಕಲಹಂಸಂ ಪಾಲಂ ಕೊಂ
ಡುಳಿವಂತಿರೆ ಪಾಲಿನಲ್ಲಿ ಸೇರಿದ ನೀರಂ || ೧೫೯ ||

(ಎಂದು ಅಸ್ತ್ರವನ್ನು ತೊಡುವನು)

(ಅನಂತರ ವಿದೂಷಕನನ್ನು ಬಿಟ್ಟು ಮಾತಲಿಯೂ ವಿದೂಷಕನೂ ಬರುವರು)

ಮಾತಲಿ—

*ಕಂದ || ಸುರಪಂ ನಿಜಶರಕಸುರರ
ಗುರಿಗೈದಿರ್ಪಂ ಗಡವರೊಳೆಳೆಯಿಾಧನುವಂ |
ನೆರೆ ಬೀಳ್ವುವು ಸಖರೊಳ್ ಸಂ
ತರ ಕರುಣಾದೃಷ್ಟಿ ಬೀಳವಲೆ ಕೂರ್ಗಣೆಗಳ್ || ೧೬೦ ||

ರಾಜಂ—(ಬಾಣವನ್ನು ಇಳಿಸಿ) ಎಲೈ ಇಂದ್ರಸಾರಥಿಯಾದ ಮಾತಲಿಯೆ, ನಿನಗೆ ಸುಖಾಗಮನವೇ ?

ವಿದೂ—ಯಾಗದ ಪಶುವನ್ನು ಹಿಂಸೆಮಾಡುವಂತೆ ನನ್ನನ್ನು ಹಿಂಸೆಮಾಡಿದವನನ್ನು ಈತನು ಕುಶಲವನ್ನು ಕೇಳಿದ್ದು ಚೆನ್ನಾಯಿತು !

ಮಾತಲಿ—(ನಕ್ಕು) ಎಲೈ ಆಯುಷ್ಮಂತನೆ ಕೇಳು ; ನನ್ನನ್ನು ಇಂದ್ರನು ಒಂದು ಕಾರಣಕ್ಕಾಗಿ ನಿನ್ನ ಸನ್ನಿಧಿಗೆ ಕಳುಹಿಸಿದನು.

ರಾಜಂ—ಇದೋ ಸಿದ್ಧನಾಗಿರುವೆನು.

ಮಾತ—ಕಾಲನೇಮಿಗೆ ಮಕ್ಕಳಾಗಿಯೂ ದುರ್ಜಯರಾಗಿಯೂ ಇರುವ ರಾಕ್ಷಸರುಂಟಷ್ಟೆ.

ರಾಜಂ—ನಾರದರ ಮುಖದಿಂದ ನಾನು ಪೂರ್ವದಲ್ಲಿ ಕೇಳಿರುವೆನು.

ಮಾ—ಕಂದ || ಸುರಪಂ ತಾಂ ಗೆಲಲಾರದ
ದುರುಳರ ಜಯಿಸಲ್ಕೆ ಶಕ್ತನೆನ್ನುತೆ ನಿನ್ನಂ |
ಸ್ಮರಿಸಿದನಿರುಳಿನ ತಮವಂ
ಪರಿಹರಿಸಲಶಕ್ತನರ್ಕನಿಂದುವೆ ಶಕ್ತಂ || ೧೬೧ ||

ಇಂದ್ರಮಿತ್ರನಾದ ನೀನು ಧನುರ್ಧಾರಿಯಾಗಿಯೇ ಇಂದ್ರರಥವನ್ನೇರಿ ಈಗಲೇ ವಿಜಯಾರ್ಥವಾಗಿ ಪ್ರಯಾಣಮಾಡಬೇಕು.

ರಾಜಂ—ಇಂದ್ರನ ಈ ಸಂಭಾವನೆಯಿಂದ ನಾನು ಅನುಗ್ರಹಿಸಲ್ಪಟ್ಟೆನು. ಆಯಿತು, ಈ ಮಾಢವ್ಯನ ವಿಷಯದಲ್ಲಿ ಏತಕ್ಕಾಗಿ ಹೀಗೆ ನಡೆಸಿದೆ ?

---

* ರಾಗ—ಜುಂಜೋಟಿ. ರೂಪಕತಾಳ.

ಏನಿದೇನು ನಿನ್ನ ನಡತೆ | ಮಾನವೇಂದ್ರನೆ || ದೀನರಕ್ಷಣಾದಿಗುಣವಿ | ತಾನಸಾಂದ್ರನೇ || ೧ ||
ಅರಸನೆ ಸುರಪತಿಯು ನಿನ್ನ | ಶರಕೆ ದೈತ್ಯರ || ಗುರಿಯ ಗೈದಿರುವನವರನುರುಹು ನರವರಾ || ೨ ||
ಇಷ್ಟರೊಳ್ ಪ್ರಸಾದಸೌಮ್ಯ | ದೃಷ್ಟಿಯಲ್ಲದೆ | ವಿಷ್ಟಪಪತಿ ಪೇಳು ಬಾಣ | ವೃಷ್ಟಿ ಬೀಳ್ವುದೆ || ೩ ||

ಮಾ—ಅದನ್ನು ಹೇಳುವೆನು, ಕೇಳು. ಯಾವ ನಿಮಿತ್ತದಿಂದಲೋ ಆಯುಷ್ಮಂತನಾದ ನೀನು ದುಃಖಿತನಾಗಿದ್ದುದನ್ನು ನೋಡಿ, ನಿನಗೆ ಕೋಪವನ್ನುಂಟು ಮಾಡುವುದಕ್ಕಾಗಿ ಹಾಗೆ ಮಾಡಿದೆನು.

ಕಂದ || ಜ್ವಲಿಪುದು ಶಿಖಿಯಿಂಧನಗಳ
ನಲುಗಿಸೆ ಕೆಣಕಿದೊಡೆ ಹೆಡೆಯನೆತ್ತುವುದುರಗಂ |
ಸಲೆ ಕೋಪಮನಾಗಿಸಿದೊಡೆ
ನಲುಗುಂ ನಿಜಧೈರ್ಯಗುಣಕೆ ಜನಮಿದು ಸಾಜಂ || ೧೬೨ ||

ರಾಜಂ—ನೀನು ಮಾಡಿದ್ದು ಯುಕ್ತ. (ಪುರೆಯಲ್ಲಿ) ಎಲೈ ಮಿತ್ರನೆ, ಇಂದ್ರನಾಜ್ಞೆಯು ಮೀರತಕ್ಕುದಲ್ಲ; ಅಮಾತ್ಯನಿಗೆ ಈ ಸಂಗತಿಯನ್ನೆಲ್ಲಾ ತಿಳಿಸಿ ನಾನು ಹೇಳಿದೆನೆಂದು ಈ ಮಾತನ್ನು ಹೇಳು :—

ಕಂದ || ಧರೆಯಂ ನಾಂ ಬರ್ಪನ್ನಂ
ಪರಿಪಾಲಿಸುತಿರ್ಕೆ ನಿನ್ನ ಮತಿ ತಾನೆನ್ನೀ |
ತಿರುವೇರಿಸಿದ ಶರಾಸನ
ಮಿರದಾದತ್ತಿತರಕಾರ್ಯದೊಳಗಾಸಕ್ತಂ || ೧೬೩ ||

ವಿದೂ—ಮಹಾರಾಜನಾಜ್ಞೆಯಾದಂತಾಗಲಿ. (ಎಂದು ಹೊರಟುಹೋಗುವನು)

ಮಾ—ಎಲೈ ಆಯುಷ್ಮಂತನೆ, ರಥವನ್ನು ಹತ್ತು.

(ರಾಜನು ರಥಾರೋಹಣವನ್ನು ಅಭಿನಯಿಸುವನು)

(ಎಲ್ಲರೂ ಹೊರಟುಹೋಗುವರು)

# ಸಪ್ತಮಾಂಕಂ

(ಅನಂತರದಲ್ಲಿ ಆಕಾಶಗಮನದಿಂದ ರಥಾರೂಢನಾಗಿ ರಾಜನೂ ಮಾತಲಿಯೂ ಬರುವರು)

ರಾಜಂ—ಎಲೈ ಮಾತಲಿಯೆ, ಇಂದ್ರನ ಆಜ್ಞೆಯನ್ನು ನೆರವೇರಿಸಿದರೂ ಆತನು ನನಗೆ ಮಾಡಿದ ಅಂತಹ ಸತ್ಕಾರಕ್ಕೆ ನಾನು ತಕ್ಕವನಲ್ಲವೆಂದು ಭಾವಿಸುವೆನು.

ಮಾ—(ನಕ್ಕು) ಎಲೈ ಆಯುಷ್ಮಂತನೆ, ಇಂದ್ರನೂ ನಿನ್ನಂತೆಯೇ ಭಾವಿಸುವನು.

ಕಂದ || ಸುರಪನೊಳೆ ಭಕ್ತಿಯಿಂ ಮುಂ
ವಿರಚಿಸಿದುಪಕೃತಿಯನಲ್ಪಮೆಂದೆಣಿಸುವೆ ನೀಂ |
ಪರಿಗಣಿಸನವನುಮಾನಿ
ನ್ನುರುಶೌರ್ಯಕೆ ಮೆಚ್ಚಿ ಗೈದ ಬಲುಮನ್ನಣೆಯಂ || ೧೬೪ ||

ರಾಜಂ—ಎಲೈ ಮಾತಲಿಯೆ, ಹಾಗಲ್ಲ. ನನ್ನನ್ನು ಕಳುಹಿಸುವ ಕಾಲದಲ್ಲಿ ಮಾಡಿದ ಆ ಮನ್ನಣೆಯು ನನ್ನ ಮನೋರಥಗಳನ್ನು ಕೂಡ ಮೀರಿದುದಲ್ಲವೆ? ಹಾಗೆಯೇ ಸರಿ. ದೇವತೆಗಳ ಮುಂದೆ ನನ್ನನ್ನು ಅರ್ಧಾಸನದಲ್ಲಿ ಕುಳ್ಳಿರಿಸಿ—

ಕಂದ || ಕೇಳಲೆಳಸುವ ಜಯಂತನ
ನಾಲೋಕಿಸಿ ನಗುತುಮುರದ ಹರಿಚಂದನದಿಂ |
ಮೇಳೈಸಿದ ಮಂದಾರದ
ಮಾಲೆಯನೆನ್ನಯ ಕೊರಲ್ಗೆ ಧರಿಸಿದನಿಂದ್ರಂ || ೧೬೫ ||

ಮಾ—ಎಲೈ ಆಯುಷ್ಮಂತನೆ, ನೀನು ಸುರೇಶ್ವರನ ಯಾವ ಮನ್ನಣೆಗೆ ತಾನೆ ಯೋಗ್ಯನಲ್ಲ? ನೋಡು—

ಕಂದ || ಸುರಪುರಕಂಟಕರೆನಿಸಿದ
ಸುರರಿಪುಗಳನಿರ *ದೆ ತೊಳ್ದುವಿವೆರಡೆ ಧರಣೀ |
ಶ್ವರ ನಿನ್ನ ಶಿಲೀಮುಖಮುಂ
ನರಸಿಂಹನ ನಮಿತಪರ್ವಮೆನಿಸಿದ ನಖಮುಂ || ೧೬೬ ||

ಮಾ—ಈ ವಿಷಯದಲ್ಲಿ ಇಂದ್ರನ ಮಹಿಮೆಯೆ ಕೊಂಡಾಡತಕ್ಕದ್ದು—

---

* ಪಾ. ದಿವಿರಡೆತೊಳ್ದುವು.

ಕಂದ || ಘನಕಾರ್ಯದೊಳಂ ಸಾಧಕ
ರೆನಿಪರ್ ಭೃತ್ಯರ್ಕಳೆಂಬುದಾಳ್ದರ ಸಂಭಾ |
ವನೆಯು ಗುಣಂ ದಿನಮಣಿಯರು
ಣನ ಮುಂದಿಡದೊಡವನೆಂತು ತಮಮಂ ತೂಳ್ವಂ || ೧೬೭ ||

ಮಾ—ನೀನು ಹೇಳಿದುದು ಸರಿಯೆ. (ಸ್ವಲ್ಪ ಮುಂದಕ್ಕೆ ಹೋಗಿ) ಎಲೈ ಆಯುಷ್ಮಂತನೆ, ಇದೋ, ಸ್ವರ್ಗದ ಹಿಂಭಾಗವನ್ನು ಮುಟ್ಟಿರುವ ನಿನ್ನ ಕೀರ್ತಿಯ ಸೌಭಾಗ್ಯವನ್ನು ನೋಡು—

ಕಂದ || ಸುರಸುಂದರಿಯರ್ಕಳ್ ಸಿಂ
ಗರಗೊಂಡುಳುಪಿರ್ದ ಬಣ್ಣದಿಂ ಕಲ್ಪಲತಾಂ |
ಬರದೊಳ್ ದಿವಿಜರ್ ನಿನ್ನಯ
ಚರಿತ್ರೆಯುಂ ಗಾನಯೋಗ್ಯಮಾಗಿರೆ ಬರೆವರ್ || ೧೬೮ ||

ರಾಜಂ—ಎಲೈ ಮಾತಲಿಯೆ, ರಾಕ್ಷಸರ ಯುದ್ಧದಲ್ಲಿ ಆಸಕ್ತನಾಗಿದ್ದ ನಾನು ನಿನ್ನೆಯ ದಿವಸ ಅಂತರಿಕ್ಷವನ್ನು ಹತ್ತುವಾಗ ಸ್ವರ್ಗದ ಮಾರ್ಗವನ್ನು ಚೆನ್ನಾಗಿ ನೋಡಲಿಲ್ಲ. ಈಗ ನಾವು ಸಪ್ತವಾಯುಗಳಲ್ಲಿ ಎಷ್ಟನೆಯ ವಾಯುವಿನ ಮಾರ್ಗದಲ್ಲಿ ಹೋಗುತ್ತಿರುವೆವು ?

ಮಾ—ಕಂದ || ದಿವಿಜಾಪಗೆಯುಂ ತಾಳು
ತ್ತಿವೆ ದಿವದೆ ವಿಭಕ್ತರಶ್ಮಿಯಾಗಲ್ ತಾರಾ |
ನಿವಹವ ನಡೆಯಿಪ ಪರಿವಹ
ಪವನನ ಮಾರ್ಗವಿದು ವಿಷ್ಣುವಿಕ್ರಮಪೂತಂ || ೧೬೯ ||

ರಾಜಂ—ಅದರಿಂದಲ್ಲವೆ ನನ್ನ ಅಂತರಂಗವು ಬಾಹ್ಯೇಂದ್ರಿಯಗಳೊಡನೆ ಸಂತೋಷಪಟ್ಟಿತು. (ರಥಚಕ್ರವನ್ನು ನೋಡಿ) ಈಗ ನಾವು ಮೇಘಮಾರ್ಗಕ್ಕೆ ಇಳಿದೆವು.

ಮಾ—ಅದನ್ನು ಹೇಗೆ ತಿಳಿದೆ ?

ರಾಜಂ—

ವೃತ್ತ || ಅರವಿವರಂಗಳೊಳ್ ನುಸುಳ್ವ ಚಾತಕಸಂಕುಲದಿಂ ತಟಿತ್ಪ್ರಭಾ
ಪರಿವೃತಮಾದ ವಾಜಿಗಳ ವಂಗಡದಿಂದಮುಮಂಬುಪೂರಿತೋ |

ದರಮೆನಿಪಂಬುದಾವಳಿಯ ಮೇಗಡೆ *ಯ್ಮೆತರುತಿರ್ಪ ಪಾಂಗ ಶೀ
ಕರದೊಳೆ ನಾಂದ ನೇಮಿಗಳನಾಂತ ಭವದ್ರಥಮಿಲ್ಲಿ ಸೂಚಿಕುಂ ||೧೭೦||

ಮಾ—ಎಲೈ ಆಯುಷ್ಮಂತನೆ, ಒಂದು ನಿಮಿಷವಾದಕೂಡಲೆ ನಿನ್ನ ಆಳಿಕೆಯ ಭೂಮಿಗೆ ಇಳಿಯುವೆ.

ರಾಜಂ—(ಕೆಳಕ್ಕೆ ನೋಡಿ) ಎಲೈ ಮಾತಲಿಯೆ, ಅತಿವೇಗವಾಗಿ ಇಳಿಯುವುದರಿಂದ ಮರ್ತ್ಯಲೋಕವು ನೋಡಲು ಆಶ್ಚರ್ಯವಾಗಿ ಕಾಣುವುದು ; ಹಾಗೆಯೇ ಸರಿ—

ವೃತ್ತ || ಇಳೆಗೆಳ್ವರ್ಪಗಶೃಂಗದಿಂದಿಳಿವವೋಲ್ತೋರ್ಕುಂ ದಳಾಭ್ಯಂತರಂ
ಗಳೊಳಾಳ್ದಂಗವ ಮಾಣ್ದುವಲ್ತೆ ನೆಗೆದಾಸ್ಕಂಧಂಗಳಿಂ ವೃಕ್ಷಗಳ್ |
ತಳೆಗುಂ ತೋರ್ಕೆಯ ಬಿತ್ತರಂಬಡೆದು ಬತ್ತಿತ್ತೆಂಬವೋಲಿರ್ದ ಪೆ
ರ್ಬೊಳೆ ಮತ್ಪಾರ್ಶ್ವವನೊಂದಿಪಂತಿರೆಸೆಗುಂ ಮರ್ತ್ಯೋರ್ವಿ ತಾನೊರ್ವನಿಂ ||

ಮಾ—ಚೆನ್ನಾಗಿ ಹೇಳಿದೆ! (ಎಂದು ಬಹುಮಾನದೊಡನೆ ನೋಡಿ) ಆಹ! ಭೂಮಿಯು ಬಹು ರಮಣೀಯವಾಗಿ ಕಾಣುವುದು.

ರಾಜಂ—ಎಲೈ ಮಾತಲಿಯೆ, ಪೂರ್ವಸಮುದ್ರದಿಂದ ಪಶ್ಚಿಮಸಮುದ್ರದ ವರೆಗೂ ವ್ಯಾಪಿಸಿ ಸಂಧ್ಯಾಕಾಲದ ಮೇಘಮಂಡಲದಂತೆ ಸುವರ್ಣರಸವನ್ನು ಸೂಸುವ ಈ ಪರ್ವತ ಯಾವುದು?

ಮಾ—ಎಲೈ ಆಯುಷ್ಮಂತನೆ, ಇದು ತಪಸ್ಸಿದ್ಧಿಕರವಾದ ಹೇಮಕೂಟವೆಂಬ ಕಿಂಪುರುಷ ಪರ್ವತವಲ್ಲವೆ?

ಕಂದ || ಸರಸಿಜಭವನಿಂ ಪುಟ್ಟಿದ
ಮರೀಚಿಗಣುಗಂ ಪ್ರಜೇಶ್ವರಂ ಸಕಲಸುರಾ |
ಸುರಗುರು †ವೆನಿಪ ಮುನೀಂದ್ರಂ
ಚರಿಪಂ ಸತಿವೆರಸು ತಪವನೀಪರ್ವತದೊಳ್ ||೧೭೨||

ರಾಜಂ—ಹಾಗಾದರೆ, ಶ್ರೇಯಸ್ಕರವಾದ ಇವರ ದರ್ಶನವನ್ನು ಮಾಡದೆ ಹೋಗಕೂಡದು. ಆದುದರಿಂದ ಪೂಜ್ಯರಾದ ಇವರನ್ನು ಪ್ರದಕ್ಷಿಣೆ ಮಾಡಿ ಹೋಗಲಿಚ್ಛೈಸುವೆನು.

---

* ಪಾ. ಬರ್ಪುದನೆಯ್ದೆತಳ್ತ.

† ಪಾ. ಮುನಿಪುಂಗವನಾ

ಮಾ—ಇದು ಮೊದಲು ಮಾಡತಕ್ಕದ್ದು. ಇದೋ ನಾವು ಇಳಿದೆವು.

ರಾಜಂ—(ನಕ್ಕು) ಎಲೈ ಮಾತಲಿಯೆ,

ಕಂದ || ಉಲಿಯವು ರಥನೇಮಿಗಳುಂ
ವಿಲೋಕಿಸಲ್ಕಿಲ್ಲ ಧೂಳಿಯಾದೊಡಮಿಲ್ಲಂ |
ನೆಲಸಂ ಮುಟ್ಟದ ಕತದಿಂ
ನಿಲಿಸಿದ ತೇರಿಳಿದುಮಿಳಿದ ಪರಿಯಂತಲ್ಲಂ || ೧೭೩ ||

ಮಾ—ಎಲೈ ಆಯುಷ್ಮಂತನೆ; ಇಂದ್ರನಿಗೂ ನಿನಗೂ ಇಷ್ಟೇ ವಿಶೇಷವು.

ರಾಜಂ—ಎಲೈ ಮಾತಲಿಯೆ, ಮಾರೀಚಾಶ್ರಮವು ಇರುವ ಸ್ಥಾನವು ಯಾವುದು ?

ಮಾ—(ಕಯ್ಯಿಂದ ತೋರಿಸಿ)

ವೃತ್ತ || ಅರೆಮೆಯ್ ವಲ್ಮೀಕದೊಳ್ ತಾಂ ಪುದುಗಿರೆಯುರದಲ್ಲೊಪ್ಪೆ ಸರ್ಪತ್ವಚಂಗಳ್
ಕೊರಲೊಳ್ ಜೀರ್ಣಂ ಲತಾಮಂಡಲಮಲೆಯೆ ಕರಂ ಸ್ಕಂಧದೊಳ್ ಪಕ್ಷಿಗಳ್ ಕ |
ಟ್ಟಿರೆ ಗೂಡಂ ನೀಳ್ದ ಬಂಬಲ್ಜಡೆ ಸೆರೆ ಮೆರೆಯಲ್ ಸ್ಥಾಣುವೋಲ್ ನಿಶ್ಚಲತ್ವಂ
ಬೆರಸಾದಂ ಸೂರ್ಯಬಿಂಬಕ್ಕಭಿಮುಖನೆನಿಪೀ ಮೌನಿ ತಾನಿರ್ಪ ತಾಣಂ ||

ರಾಜಂ—ಅತಿಕಷ್ಟದಿಂದ ತಪವನ್ನಾಚರಿಸುವ ಈತನಿಗೆ ನಮಸ್ಕಾರವು.

ಮಾ—(ಕಡಿವಾಣವನ್ನು ಹಿಡಿದುಬಿಟ್ಟು) ಇದೋ, ಈಗ ಅದಿತಿ ಬೆಳೆಸಿದ ಮಂದಾರವೃಕ್ಷದಿಂದ ಕೂಡಿದ ಮಾರೀಚಮಹರ್ಷಿಯ ಆಶ್ರಮವನ್ನು ಹೊಕ್ಕೆವು.

ರಾಜಂ—ಈ ಸ್ಥಾನವು ಸ್ವರ್ಗಕ್ಕಿಂತಲೂ ಅಧಿಕತರವಾದ ಸುಖವನ್ನುಂಟು ಮಾಡುವುದು ; ಅಮೃತದ ಮಡುವಿನಲ್ಲಿ ಮುಳುಗಿದಂತಾದೆನು.

ಮಾ—(ರಥವನ್ನು ನಿಲ್ಲಿಸಿ) ಎಲೈ ಆಯುಷ್ಮಂತನೆ, ಇಳಿಯಬೇಕು.

ರಾಜಂ—(ಇಳಿದು) ಎಲೈ ಮಾತಲಿಯೆ, ನೀನೋ ?

ಮಾ—(ರಥವನ್ನು ನಿಲ್ಲಿಸಿ) ನಾವು ಇಳಿಯುವೆವು. (ಎಂದು ರಥವನ್ನು ಇಳಿದು) ಎಲೈ ಆಯುಷ್ಮಂತನೆ, ಇತ್ತಬಾ. ಪೂಜ್ಯರಾದ ಋಷಿಗಳ ತಪೋವನಭೂಮಿಗಳನ್ನು ನೋಡು.

ರಾಜ—ಎಲೈ ಇಂದ್ರಸಾರಥಿಯೆ, ಆಶ್ಚರ್ಯದೊಡನೆ ನೋಡುವೆನು.

೬ೂ.

ವೃತ್ತ || ಆವರಿಸಿರ್ದ ಕಲ್ಪತರುಕಾನನದೊಳ್ ಪವನಾಶನಂ ಮಣಿ
ಗ್ರಾವದೆ ಜಾಸಮಂತೆ ಕನಕಾಬ್ಜ ಸರೋವರದಲ್ಲಿ ಮಜ್ಜನಂ |
ದೇವವಧೂಸಮೀಪದೊಳೆ ಸಂಯಮವೊಪ್ಪೆ ಪೆರರ್ ಮುನೀಂದ್ರರೊ
ಲ್ದಾವುದ ಕಾಂಕ್ಷಿಪರ್ ತಪಗಳಿಂ ತಪಮಿರ್ದಪರಲ್ಲಿ ತಾಮಿವರ್ ||

ಮಾ—ಮಹಾತ್ಮರ ಮನೋಭಿಲಾಷೆಯು ಮೇಲೆಮೇಲೆ ಏರತಕ್ಕದ್ದು. (ನಡೆದು ಆಕಾಶವನ್ನು ನೋಡಿ) ಎಲೈ ವೃದ್ಧ ಶಾಕಲ್ಯನೆ, ಪೂಜ್ಯರಾದ ಮಾರೀಚ ಮುನಿಗಳು ಏನುಮಾಡುತ್ತಿರುವರು? (ಕಿವಿಗೊಟ್ಟು) ಏನು? ಋಷಿಪತ್ನಿಯರೊಡನೆ ಪ್ರಶ್ನೆಮಾಡಿದ ದಕ್ಷಪುತ್ರಿಯಾದ ಅದಿತಿದೇವಿಗೆ ಪತಿವ್ರತಾಧರ್ಮವನ್ನು ಉಪದೇಶ ಮಾಡುತ್ತಿರುವರೆಂದು ಹೇಳುತ್ತೀಯೋ?

ರಾಜಂ—ಹಾಗಾದರೆ ನಾವು ಸಮಯವನ್ನು ಕಾದಿರಬೇಕಲ್ಲವೆ?

ಮಾ—(ರಾಜನನ್ನು ನೋಡಿ) ಎಲೈ ಆಯುಷ್ಮಂತನೆ, ಗುರುಗಳಿಗೆ ತಿಳಿಸಿ ಬಂದು ನಿನ್ನನ್ನು ಕರೆದುಕೊಂಡು ಹೋಗುವೆನು; ಆವರೆಗೂ ಈ ಅಶೋಕವೃಕ್ಷದ ಕೆಳಗೆ ಕುಳಿತಿರು. (ಎಂದು ಮಾತಲಿಯು ಹೋಗುವನು)

ರಾಜಂ—ನೀನು ಹೇಳಿದಂತಾಗಲಿ. (ಎಂದು ಕುಳಿತುಕೊಳ್ಳುವನು)

ರಾಜಂ—(ನಿಮಿತ್ತವನ್ನು ಸೂಚಿಸಿ)

ಕಂದ || ಎಲೆ ಭುಜವೆ ಸುಮ್ಮನೇತಕೆ
ಚಲಿಪೆ ಮನೋರಥಕೆ ನಾನಪೇಕ್ಷಿಪನಲ್ಲಂ |
ತಿಳಿವಣಮಿಲ್ಲದೆ ಪೂರ್ವದೊ
ಳುಳಿದ ಶುಭಂ ದುಃಖವಾಗಿ ಪರಿಣಮಿಪುದರಿಂ || ೧೭೬ ||

(ತೆರೆಯಲ್ಲಿ)

ಚಾಪಲ್ಯವನ್ನು ಮಾಡಬೇಡ ಮಾಡಬೇಡ! ಇನ್ನೇನು! ತನ್ನ ಸ್ವಭಾವವನ್ನು ಪಡೆದೇ ಪಡೆದನು.

ರಾಜಂ—(ಕಿವಿಗೊಟ್ಟು) ಇದು ಅವಿನಯಕ್ಕೆ ತಕ್ಕ ಸ್ಥಳವಲ್ಲ! ಚಾಪಲ್ಯವನ್ನು ಮಾಡಬೇಡವೆಂದು ಯಾರನ್ನು ಶಿಕ್ಷಿಸುವರು? (ಸದ್ದಾದ ಕಡೆಗೆ ತಿರುಗಿ ನೋಡಿ—ಆಶ್ಚರ್ಯದೊಡನೆ ಕೂಡಿ) ಆಹ! ತಾಪಸಿಯರಿಂದ ಅನುಬಂಧಿಸಲ್ಪಟ್ಟು, ಬಾಲ್ಯಕ್ಕೆ ಮೀರಿದ ಶಕ್ತಿಯುಳ್ಳ ಈ ಬಾಲನು ಯಾರು?

ಕಂದ || ಅರರೇ ಜನನಿ*ಯ ಮೊಲೆವಾ
ಲರೆಯುಂಡೀಸಿಂಹಶಿಶುವನಿರದೊಡನಾಡಲ್ |
ಕರಮರ್ದನದಿಂದಂ ಕೇ
ಸರಂಗಳಲೆಯೊಂದೆ ಸೆಳೆಯುತಿರ್ಪಂ ಬಲ್ಪಿಂ || ೧೭೭ ||

(ಸಿಂಹದ ಮರಿಯನ್ನು ಎಳೆದಾಡುತ್ತಾ ಬಾಲಕನು ತಾಪಸಿಗಳೊಡನೆ ಬರುವನು)

†ಬಾಲ—ಎಲೆ ಸಿಂಹದ ಮರಿಯೆ, ಆಕಳಿಸು ಆಕಳಿಸು. ನಿನ್ನ ಹಲ್ಲುಗಳನ್ನು ಲೆಕ್ಕಮಾಡುವೆನು.

೧ ನೆಯವಳು—ಎಲೈ ದುರುಳನೆ, ನಮಗೆ ಮಕ್ಕಳಂತಿರುವ ಪ್ರಾಣಿಗಳನ್ನು ಏತಕ್ಕೆ ನೋಯಿಸುವೆ? ಇನ್ನೇನು ಗತಿ? ನಿನ್ನ ಚಲ ಹೆಚ್ಚೇಹೆಚ್ಚಿತು; ನಿನಗೆ ಋಷಿಗಳು ಸರ್ವದಮನನೆಂದು ಹೆಸರಿಟ್ಟದ್ದು ಯುಕ್ತವಾದದ್ದೆ.

ರಾಜಂ—ಇದೇನು? ಹೊಟ್ಟೆಯಲ್ಲಿ ಹುಟ್ಟಿದ ಮಗನಲ್ಲಿ ಅನುರಾಗಿಸುವಂತೆ ಈ ಬಾಲಕನಲ್ಲಿ ಮನಸ್ಸು ಅನುರಾಗಪಡುವುದು! ನಿಜ; ಮಕ್ಕಳಿಲ್ಲದ್ದು ಹೀಗೆ ವಾತ್ಸಲ್ಯವನ್ನು ಉಂಟುಮಾಡಬಹುದು.

೨ ನೆಯವಳು—ಎಲೈ ಸರ್ವದಮನನೆ, ಇದರ ಮರಿಯನ್ನು ನೀನು ಬಿಡದಿದ್ದರೆ ಈ ಹೆಣ್ಣುಸಿಂಹವು ನಿನ್ನ ಮೇಲೆ ಬೀಳುವುದು.

ಬಾಲ—(ನಕ್ಕು) ಓಹೋ! ನನಗೆ ಭಯವುಂಟಾಯಿತು!

(ಎಂದು ತುಟಿಯನ್ನು ತೋರಿಸುವನು)

ರಾಜಂ—ಕಂದ || ಅಮಮಾ ಸ್ಫುಲಿಂಗದಶೆಯೊಳ್
ಸಮಿತ್ತುಗಳನೆಳಸುತಿರ್ಪ ವಹ್ನಿಯ ತೆರದಿಂ |
ಸುಮಹಾತೇಜೋಬೀಜಂ
ಕುಮಾರನಿವನೆನಗೆ §ನೋಡೆ ಕಾಣುತ್ತಿರ್ಪಂ || ೧೭೮ ||

೧ ನೆಯವಳು—ಎಲೈ ವತ್ಸನೆ, ಈ ಸಿಂಹದ ಮರಿಯನ್ನು ಬಿಡು. ನಿನಗೆ ಆಡುವುದಕ್ಕೆ ತಕ್ಕ ಇನ್ನೊಂದು ಪದಾರ್ಥವನ್ನು ಕೊಡುವೆನು.

---

* ಪಾ, ನೀಸ್ತನ್ಯಮು.

† ರಾಗ—ಹಿಂದೂಸ್ಥಾನಿಕಾಪಿ. ಆದಿತಾಳ.

ಬಾಬಾ ಕೇಸರಿಶಾಬಾ | ಛಡ ಬಾಬಾ || ಪ || ಕುಣಿಕುಣಿ ನಿನಗಾ | ರೆಣೆ ಬಾಯ್ಬಿಡು ಬಿಡು | ಎಣಿಸುವೆ ನಿನ್ನೀಪಲ್ಲಾನೆಲ್ಲಾ || ೧ ||

§ ಪಾ. ಕಾಣುತಿರ್ಪಂ ಬಗೆಯಲ್

ಬಾಲ—ಎಲ್ಲಿ ಅದೇನು ? ಕೊಡು. (ಎಂದು ಹಸ್ತವನ್ನು ನೀಡುವನು)

ರಾಜಂ—(ನೋಡಿ ಆಶ್ಚರ್ಯದಿಂದ ಕೂಡಿ) ಇದೇನು ! ಈ ಬಾಲಕನು ಚಕ್ರವರ್ತಿಲಕ್ಷಣದಿಂದಲೂ ಕೂಡಿರುವನು. ಹಾಗೆಯೇ ಸರಿ—

ಕಂದ || ಬೇಡಲ್ ನಿಜೇಷ್ಟವಸ್ತುವ
ನೀಡಿದ ಕೈ ತೆರಪಸುಳಿದ ಬೆರಳ್ಗಳಿನೆಸೆಗುಂ |
ಮೂಡಣ ಕೆಂಪಿಂದಲರ್ದೊಡ
ಗೂಡಿದ ದಳದಿಂದೆ ಮೆರೆವ ಸರಸಿರುಹಂಬೋಲ್ || ೧೭೯ ||

೨ ಸೆಯುವಳು—ಎಲೌ ಸುವ್ರತೆಯೇ, ವಾಙ್ಮಾತ್ರದಿಂದ ಇವನನ್ನು ಸುಮ್ಮ ನಿರಿಸಲಾರೆನು, ನಡೆ ; ನನ್ನ ಪರ್ಣಶಾಲೆಯಲ್ಲಿ ಋಷಿಪುತ್ರನಾದ ಮಾರ್ಕಂಡೇಯ ನಾಡುವ ಬಣ್ಣದ ಮಣ್ಣಿನ ನವಿಲಿರುವುದು ; ಅದನ್ನು ತೆಗೆದುಕೊಂಡು ಬಾ.

೧ ಸೆಯುವಳು—ಹಾಗಾಗಲಿ. (ಎಂದು ಹೋಗುವಳು)

ಬಾಲ—ಅವರೆಗೂ ಇದರ ಸಂಗಡಲೇ ಆಡುವೆನು. (ಎಂದು ತಾಪಸಿಯನ್ನು ನೋಡಿ ನಗುವನು)

ರಾಜಂ—ದುರುಳತನವುಳ್ಳ ಈ ಬಾಲಕನಲ್ಲಿ ನನ್ನ ಮನಸ್ಸು ಆಸೆಪಡುವುದು.

ಮ
ವೃತ್ತ || ಮೊಳೆವಲ್ ಶೋಭಿಸೆ ನಿರ್ನಿಮಿತ್ತಹಸಿತಂ ಚೆಲ್ವಾಗೆ ಲಾಲಾಜಲಂ
ತುಳುಕಲ್ ಬರ್ಪ ತೊದಳ್ ಮನಂಗೊಳಿಸಲಂಕಾರೋಹಕಿಚ್ಛೈಪ ಮ |
ಕ್ಕಳ ನಿಕ್ಕೆರ್ಗಳಿನೆತ್ತಿಕೊಂಡು ನಲವಿಂ ತದ್ದೇಹಜಂಚದ್ರಜೋ
ಮಳಿನಾಂಗರ್ಕಳೆನಿಪ್ಪ ಮಾನವರೆ ತಾಂ ಧನ್ಯರ್ ವಲಂ ಧಾತ್ರಿಯೊಳ್ ||

ತಾಪಸಿ—ಒಳ್ಳೆಯದು, ಆಗಲಿ ; ಇವನು ನನ್ನನ್ನು ಗಣನೆ ಮಾಡುವುದಿಲ್ಲ. (ಎಂದು ಎಡಬಲವನ್ನು ನೋಡಿ) ಋಷಿಕುಮಾರರಲ್ಲಿ ಇಲ್ಲಿ ಯಾರೂ ಇಲ್ಲವೆ ? (ರಾಜನನ್ನು ನೋಡಿ) ಎಲೈ ಸೌಮ್ಯಮುಖನೆ, ಇತ್ತಬಾ. ಬಿಡಿಸುವುದಕ್ಕೆ ಅಶಕ್ಯವಾದ ಮುಷ್ಟಿಯಿಂದ ಹಿಡಿದು ಹುಡುಗತನದಿಂದ ಇವನು ಬಾಧಿಸುವ ಸಿಂಹದ ಮರಿಯನ್ನು ಬಿಡಿಸು.

ರಾಜಂ—(ನಗೆಯಿಂದ ಕೂಡಿ ಸಮೀಪಕ್ಕೆ ಬಂದು)

ಕಂದ || ಎನಸುಂ ನೀನೇಕಾಶ್ರಮ
ಕನುಚಿತವಹ ಗುಣದೆ ಜಂತುಗಳ ತವಿಸದ ಪು |
ಟ್ಟಿನ ಸಂಯಮಗುಣಮಂ ಚಂ
ದನತರುವಂ ಕೃಷ್ಣಸರ್ಪಶಿಶುವೋಲ್ ಕಿಡಿಪೈ || ೧೮೧ ||

ತಾಪಸಿ—ಎಲೈ ಸೌಮ್ಯಮುಖನೆ, ಈತನು ಋಷಿಕುಮಾರನಲ್ಲವಲ್ಲಾ.

ರಾಜಂ—ಆಕಾರಕ್ಕೆ ತಕ್ಕ ಇವನ ನಡತೆಯೇ ಹೇಳುವುದು. ಆಶ್ರಮದ ನಂಬಿಕೆಯಿಂದ ನಾವು ಹೀಗೆ ಊಹಿಸಿದೆವು. (ತನ್ನ ಇಚ್ಛಾನುಸಾರವಾಗಿ ಬಾಲಕನನ್ನು ಆಲಿಂಗಿಸಿಕೊಂಡು ಸ್ಪರ್ಶಸುಖವನ್ನು ಹೊಂದಿ, ತನ್ನಲ್ಲಿ ತಾನು)

ಕಂದ || ಇವನಾವನ ಕುವರನೊ ನಾ
ನಿವನಂ ತಳ್ಕೈಸಲಿಂತು ಸುಖವೆನಗಾದ|
ತ್ತವನಿಯೊಳಗೆ ತನ್ನಂ ಪೆ
ತ್ತ ವಿಪುಲಪುಣ್ಯಂಗೆ ಸುಖವನೆನಿತಿತ್ತಪನೋ || ೧೮೨ ||

ತಾಪಸಿ—(ಇಬ್ಬರನ್ನೂ ನೋಡಿ) ಆಶ್ಚರ್ಯ! ಆಶ್ಚರ್ಯ!

ರಾಜಂ—ಆಶ್ಚರ್ಯವೇನು?

ತಾಪಸಿ—ಈ ಬಾಲಕನ ರೂಪು ನಿನ್ನ ಸಂಬಂಧವನ್ನು ಹೋಲುವುದೆಂದೂ ನೀನು ಅಪರಿಚಿತನಾದರೂ ನಿನ್ನಲ್ಲಿ ಇವನು ಅನುಕೂಲನಾಗಿರುವನೆಂದೂ ವಿಸ್ಮಿತಳಾದೆನು.

ರಾಜಂ—(ಬಾಲಕನನ್ನು ಮುದ್ದಿಸಿ) ಎಲೌ ಪೂಜ್ಯಳೆ, ಇವನು ಮುನಿಕುಮಾರನಲ್ಲದಿದ್ದರೆ ಯಾವ ಕುಲದಲ್ಲಿ ಹುಟ್ಟಿದವನು?

ತಾಪಸಿ—ಇವನು ಪುರುಕುಲದಲ್ಲಿ ಹುಟ್ಟಿದವನು.

ರಾಜಂ—(ತನ್ನಲ್ಲಿ ತಾನು) ಇವನು ನಮ್ಮ ಕುಲದವನೆ? ಆದುದರಿಂದಲೇ ಪೂಜ್ಯೆಯಾದ ಈಕೆಯು ಇವನನ್ನು ನನ್ನ ಹೋಲಿಕೆಯುಳ್ಳವನೆಂದು ಹೇಳಿದಳು. ಪುರುವಂಶದವರಿಗೆ ವನನಿವಾಸವು ಮುಪ್ಪಿನಲ್ಲಿ ಕುಲವ್ರತವಾಗಿರುವುದಷ್ಟೆ?

ಕಂದ || ಇಳೆಯಂ ಸಲಹಲ್ ಮುಂ ಮಂ
ಜುಳಸೌಧಾವಾಸಕೆಳಸುವಾ ಪುರುಕುಲಜರ್ |
ಬಳಿಕಂ ವಾನಪ್ರಸ್ಥ
ಕ್ಕಳವಡೆ ತಾಂ ವೃಕ್ಷಮೂಲಮುಂ ಮನೆಗೈವರ್ || ೧೮೩ ||

(ಪ್ರಕಾಶವಾಗಿ) ಈ ದೇವಭೂಮಿಯು ಮನುಷ್ಯರಿಗೆ ಗೋಚರವಾಗತಕ್ಕುದಲ್ಲವಲ್ಲಾ.

ತಾಪಸಿ—ಎಲೈ ಸೌಮ್ಯಮುಖನೆ, ನೀನು ಹೇಳಿದ್ದು ಸರಿ; ಆದರೆ ಈತನ ತಾಯಿ ಅಪ್ಸರಸ್ತ್ರೀಗೆ ಮಗಳಾದ ಕಾರಣ ದೇವಗುರುವಾದ ಮಾರೀಚಮುನಿಗಳ ಈ ತಪೋವನದಲ್ಲಿ ಇವನನ್ನು ಹೆತ್ತಳು.

ರಾಜಂ—(ಮರೆಯಾಗಿ) ಆಹ! ಆಸೆಯನ್ನು ಹುಟ್ಟಿಸುವುದಕ್ಕೆ ಇದು ಎರಡನೆಯದು. (ಪ್ರಕಾಶವಾಗಿ) ಆಕೆಗೆ ಪತಿಯಾದ ರಾಜಋಷಿಯ ಹೆಸರೇನು?

ತಾಪಸಿ—ಧರ್ಮಪತ್ನಿಯನ್ನು ಬಿಟ್ಟವನ ಹೆಸರನ್ನು ಎತ್ತುವುದಕ್ಕೆ ಯಾರಿಗೆ ತಾನೆ ಮನಸ್ಸು ಬಂದೀತು?

ರಾಜಂ—(ತನ್ನಲ್ಲಿ ತಾನು) ಇದೇನು, ಈ ಕಥೆ ನನ್ನನ್ನೇ ಗುರಿಮಾಡುವುದು? ಒಳ್ಳೆಯದು, ಈ ಬಾಲಕನ ತಾಯಿ ಹೆಸರನ್ನು ಕೇಳೋಣ; ಅಥವಾ ಪರಪತ್ನಿಯ ವಿಚಾರವು ಸರಿಯಾದುದಲ್ಲ.

(ಮಣ್ಣಿನ ನವಿಲನ್ನು ಹಿಡಿದುಕೊಂಡು ತಾಪಸಿ ಬರುವಳು)

ತಾಪಸಿ—ಎಲೈ ಸರ್ವದಮನನೆ, ಶಕುಂತಲಾವಣ್ಯವನ್ನು ನೋಡು!

ಬಾಲ—(ಕಣ್ಣೆತ್ತಿನೋಡಿ) ಎಲ್ಲಿ ನಮ್ಮ ಅಮ್ಮ?

ಇಬ್ಬರೂ—(ನಕ್ಕು) ತಾಯ ಹಂಬಲುಳ್ಳ ಈ ಬಾಲಕನು, ಶಕುಂತಲಾವಣ್ಯವೆಂದು ನಾನು ಆಡಿದುದನ್ನು ಕೇಳಿ ನಾಮಸಾದೃಶ್ಯದಿಂದ ಭ್ರಮಿಸಿದನು.

೨ನೆಯವಳು—ಎಲೈ ವತ್ಸನೆ, ಈ ಮಣ್ಣಿನ ನವಿಲ ಚೆಲುವಿಕೆಯನ್ನು ನೋಡೆಂದು ಹೇಳಿದೆನು.

ರಾಜಂ—(ತನ್ನಲ್ಲಿ ತಾನು) ಈ ಬಾಲಕನ ತಾಯಿ ಹೆಸರು ಶಕುಂತಳೆಯೆಂದೇ? ಒಂದೇ ಹೆಸರಿನವರು ಬಹಳವಾಗಿ ಉಂಟಷ್ಟೆ! ಆದರೂ, ಈ ಹೆಸರು ಮಾತ್ರ ಮೃಗತೃಷ್ಣಿಕೆಯಂತೆ ನನಗೆ ವಿಷಾದವನ್ನುಂಟುಮಾಡುವುದು.

ಬಾಲ—ಅಮ್ಮಾ, ಈ ಬಣ್ಣದ ನವಿಲು ನನಗೆ ಬೇಕು. (ಎಂದು ಆಟದ ನವಿಲನ್ನು ತೆಗೆದುಕೊಳ್ಳುವುದಕ್ಕೆ ಕೈ ನೀಡುವನು)

೧ನೆಯವಳು—(ಭಯದಿಂದ ಕೂಡಿ) ಓಹೋ! ರಕ್ಷಾಯಂತ್ರವು ಈತನ ಮುಂಗೈಯಲ್ಲಿ ಕಾಣುವುದಿಲ್ಲ!

ರಾಜಂ—ಭಯಪಡಬೇಡಿ, ಸಿಂಹದ ಮರಿಯನ್ನು ಮರ್ದಿಸುವಾಗ ಇದೋ ಜಾರಿ ಬಿದ್ದಿದೆ. (ಎಂದು ತೆಗೆದುಕೊಳ್ಳುವನು)

ಇಬ್ಬರೂ—ಬೇಡಬೇಡ; ಇನ್ನೇನು ಗತಿ! ತೆಗೆದುಕೊಂಡನಲ್ಲ!

(ಎಂದು ಆಶ್ಚರ್ಯದಿಂದ ಎದೆಯಲ್ಲಿ ಕೈಗಳನ್ನು ಇಟ್ಟುಕೊಂಡು ಒಬ್ಬರನ್ನೊಬ್ಬರು ನೋಡುವರು)

ರಾಜಂ—ಏತಕ್ಕೋಸ್ಕರ ಮುಟ್ಟಬೇಡವೆಂದು ಹೇಳಿದಿರಿ?

೧ನೆಯವಳು—ಎಲೈ ಮಹಾರಾಜನೆ ಕೇಳು; ಇದು ಅಪರಾಜಿತೆಯೆಂಬ ಮೂಲಿಕೆ; ಇದನ್ನು ಇವನಿಗೆ ಜಾತಕರ್ಮಸಮಯದಲ್ಲಿ ಪೂಜ್ಯರಾದ ಮಾರೀಚರು

ಕಟ್ಟಿದರು. ನೆಲಕ್ಕೆ ಬಿದ್ದರೆ ಇದನ್ನು ತಂದೆತಾಯಿಗಳೂ ಕಟ್ಟಿದವರೂ ಹೊರತಾಗಿ ಇತರರು ಮುಟ್ಟುವುದಿಲ್ಲ.

ರಾಜಂ—ಒಂದುವೇಳೆ ಮುಟ್ಟಿದರೆ ?

೧ನೆಯವಳು—ಮುಟ್ಟಿದ ಕ್ಷಣವೆ ಸರ್ಪವಾಗಿ ಕಚ್ಚುವುದು.

ರಾಜಂ—ನೀವು ಹೇಳಿದಹಾಗೆ ಯಾವಾಗಲಾದರೂ ನಡೆದಿರುವುದನ್ನು ನೋಡಿರುವಿರಾ ?

ಇಬ್ಬರೂ—ಅನೇಕಾವೃತ್ತಿ.

ರಾಜಂ—(ಸಂತೋಷದೊಡನೆ ಕೂಡಿ) ಈಗ ಪೂರ್ಣವಾದ ನನ್ನ ಮನೋರಥ ವನ್ನು ಇನ್ನು ಹೇಗೆತಾನೇ ಕೊಂಡಾಡದಿರಲಿ. (ಎಂದು ಬಾಲನನ್ನು ಆಲಿಂಗಿಸುವನು)

೨ ನೆಯವಳು—ಎಲೌ ಸುವ್ರತೆ? ನಡೆ, ನಿಯಮನಿರತೆಯಾಗಿರುವ ಶಕುಂತಳೆಗೆ ಈ ವೃತ್ತಾಂತವನ್ನು ತಿಳಿಸೋಣ. (ಎಂದು ಹೊರಡುವರು)

ಬಾಲ—ನನ್ನನ್ನು ಬಿಡು, ನಾನು ತಾಯ ಬಳಿಗೆ ಹೋಗುವೆನು.

ರಾಜಂ—ಎಲೈ ಪುತ್ರನೆ, ನನ್ನೊಡನೆ ನಿನ್ನ ತಾಯನ್ನು ಸಂತೋಷಪಡಿಸುವೆ, ತಾಳು.

ಬಾಲ—ನನ್ನ ತಂದೆಯಾದರೋ, ದುಷ್ಯಂತನು. ನೀನು ಯಾರು ?

ರಾಜಂ—(ನಗೆಯೊಡನೆ ಕೂಡಿ) ಈ ವಿವಾದವೆ ನನಗೆ ವಿಶ್ವಾಸವನ್ನುಂಟು ಮಾಡುವುದು.

(ಅನಂತರ ಒಂದೇ ಜಡೆಗಟ್ಟಿದ ಮುಡಿಯುಳ್ಳ ಶಕುಂತಳೆ ಬರುವಳು)

ಶಕುಂ—ಸರ್ವದಮನನ ಕಯ್ಯಲ್ಲಿದ್ದ ಮೂಲಿಕೆಯು ಸರ್ಪವಾಗದೇ ಇದ್ದ ಸಂಗತಿಯನ್ನು ಕೇಳಿದಾಗ್ಯೂ ನನ್ನ ಭಾಗ್ಯದಲ್ಲಿ ನನಗೇನೂ ಕೋರಿಕೆಯುಂಟಾಗ ಲಿಲ್ಲ ; ಒಂದುಪಕ್ಷಕ್ಕೆ ಸಾನುಮತಿ ಹೇಳಿದಂತೆ ಸಂಭಾವಿಸಲ್ಪಡಬೇಕಾಗಿದೆ.

ರಾಜಂ—(ಶಕುಂತಳೆಯನ್ನು ನೋಡಿ) ಆಹಾ! ಇದೋ ಪೂಜ್ಯಳಾದ ಶಕುಂತಳೆ !

† ಕಂದ || ಧರಿಸಿದ ಮಲಿನಾಂಬರದಿಂ
ಕೊರಗಿದ ಮೊಗದಿಂದದೊಂದೆ ಜಡೆಯಿಂದಿದೊ ನಿ |

---

† ರಾಗ—ಶ್ರೀರಂಜಿನಿ. ಆದಿತಾಳ.

**ಕಂಡೆನು ಕಾಂತಾಮಂಡಲಮಣಿಯಾ | ಪುಂಡರೀಕಾಕ್ಷಿಯ ಪುಣ್ಯಚರಿತೆಯಾ || ಪ || ಕಂಡೆನು ಮತ್ಕೃತಾಖಂಡಸುವ್ರತೆಯಾ || ಅ || ಮಾಸಿದ ವಸ್ತ್ರವ ಧರಿಸುತೆ ಧೂಳೀ | ಧೂಸರ ವಾಗಿಹ ಕೇಶವ ತಾಳಿ | ವಾಸರಶಶಿವೊಲು | ಭಾಸಿಪ ಸತಿಯಾ || ೧ || ಪರಿಕಿಸೆ ಕಠಿನಾತ್ಮನು ಮಾದೆನ್ನಾ | ವಿರಹವ್ರತವನು ಧರಿಸುತೆ ಮುನ್ನ | ವರಗುಣವನು ಬಿಡ | ದಿರುವ ಸುವ್ರತೆಯಾ ||**

ಷ್ಕರುಣನುಮಾಡೆನ್ನಯ ಚಿರ
ವಿರಹವ್ರತಮಂ ಸುಶೀಲೆ ತಾಂ ತಳೆದಿರ್ಪಳ್ ||೧೮೪||

ಶಕುಂ—(ಪಶ್ಚಾತ್ತಾಪದಿಂದ ಕಳೆಗುಂದಿದ ರಾಜನನ್ನು ನೋಡಿ) ಆರ್ಯಪುತ್ರನ ಹಾಗಿಲ್ಲವಲ್ಲಾ ! ಇವನಾವನು, ಕಟ್ಟಿದ ರಕ್ಷೆಯಿಂದ ಮಂಗಳಾಂಗನಾದ ನನ್ನ ಮಗನನ್ನು ಮುಟ್ಟಿ ಅಪರಿಶುದ್ಧನನ್ನು ಮಾಡುವನು ?

ಬಾಲ—(ತಾಯ ಬಳಿಗೆ ಬಂದು) ಅಮ್ಮಾ ಪರಕೀಯನಾದ ಇವನಾವನು ? ನನ್ನನ್ನು ಪುತ್ರನೆಂದು ಆಲಿಂಗಿಸುವನು.

ರಾಜಂ—ಎಲೆ ಪ್ರಿಯೆ, ನಿನ್ನ ವಿಯೋಗದಿಂದ ಬಡವಾಗಿರುವ ನನ್ನ ಆಕೃತಿಯನ್ನು ನೋಡಿ ಆರ್ಯಪುತ್ರನ ಹಾಗಿಲ್ಲವೆಂದು ನುಡಿದ ಕಾರಣದಿಂದ ನಾನು ನಿನ್ನಲ್ಲಿ ನಡೆಸಿದ ಕ್ರೂರತನವೂ ಅನುಕೂಲವಾಗಿ ಪರಿಣಮಿಸುವುದಾಯಿತು, ಎಂದು ತಿಳಿವೆನು.

ಶಕುಂ—(ತನ್ನಲ್ಲಿ ತಾನು) ಎಲೆ ಮನಸ್ಸೆ ಸಂತೈಸಿಕೊ, ಸಂತೈಸಿಕೊ. ಮತ್ಸರವನ್ನು ಬಿಟ್ಟ ಮಹಾರಾಜನ ಕರುಣಕ್ಕೆ ಪಾತ್ರಳಾದೆನು ; ಈತನೇ ಆರ್ಯಪುತ್ರನು.

ರಾಜಂ—ಕಂದ || ರಾಹು ತೊರೆದೊಡನೆ ಶಶಿಯಂ
ರೋಹಿಣಿ ಬಳಿವೊರ್ದಿದಂತೆ ನೆನಪಿಂದಿರದಾ |
ಮೋಹತಮಮಳಿಯೆ ಸುಕೃತದೆ
ನೀಹಾರಕರಾಸ್ಯೆ ಸೇರ್ದೆಯೆನ್ನಯ ಬಳಿಯಂ ||೧೮೫||

ಶಕುಂ—ಆರ್ಯಪುತ್ರನೆ, ಜಯಶೀಲನಾಗು. (ಎಂದು ಅರ್ಧೋಕ್ತಿಯಲ್ಲಿ ಕಣ್ಣೀರು ಕುತ್ತಿಗೆಯನ್ನು ಹಿಡಿಯಲು ಸುಮ್ಮನಿರುವಳು)

ರಾಜಂ—ಕಂದ || ಸುದತಿಯೆ ಜಯಶಬ್ದಂ ಗ
ದ್ಗದದಿಂ ಪೊರಮಡದೊಡಂ ಜಯಾನ್ವಿತನಾದೆಂ |
ಇದೊ ನಿನ್ನ ಪಾಟಲಾಧರ
ವದನಾಬ್ಜವ ನಾಂ ವಿಲೋಕಿಸಿದ ಕತದಿಂದಂ ||೧೮೬||

ಬಾಲ—ಅಮ್ಮಾ, ಈತನಾರು ?

ಶಕುಂ—ಎಲೆ ಮಗನೆ, ನಿನ್ನ ಭಾಗ್ಯಗಳನ್ನು ಕೇಳು.

ರಾಜಂ—(ಶಕುಂತಳೆಗೆ ಮಣಿದು)

*ವೃತ್ತ || ಬರಿದೆ ನಿಜೇಶನೆನ್ನ ತೊರೆದಂ ಗಡೆನುತ್ತಿಲೆ ಮಂಗಳಾಂಗಿ ಮ
ತ್ಸರಿಸದಿರೇತರಿಂದವೊ ಮನಕ್ಕರಿವಿಲ್ಲದೆ ಪೋದುದಂದು ಕೇಳ್ |
ಪಿರಿದು ಶುಭಂಗಳೊಳ್ ಮರವೆಯುಳ್ಳರೊಳೀ ಪರಿಯಲ್ತೆ ವರ್ತಸಂ
ಸಿರದೆಡೆಗಿಟ್ಟ ಮಾಲೆಯುಮಸಂಧನಹಿಭ್ರಮೆಯಿಂದೆ ನೂಂಕುವಂ ||

ಶಕುಂ—ಆರ್ಯಪುತ್ರನೆ, ಏಳು, ಏಳು. ನಿಜವಾಗಿ ನನ್ನ ಸುಕೃತಪ್ರತಿಬಂಧಕವಾದ ಪುರಾಕೃತ ಕರ್ಮವು ಆಗ ಪರಿಣಮಿಸತೊಡಗಿತು ; ಆದುದರಿಂದಲೇ ದಯಾಳುವಾದ ನೀನೂ ನನ್ನ ವಿಷಯದಲ್ಲಿ ಆ ತೆರನಾದೆ. (ರಾಯನು ಏಳುವನು) ಆಯಿತು ; ಆರ್ಯಪುತ್ರನೆ, ದುಃಖಭಾಜನೆಯಾದ ನನ್ನನ್ನು ಆಮೇಲೆ ಹೇಗೆ ಸ್ಮರಿಸಿದೆ ?

ರಾಜಂ—ನನ್ನ ದುಃಖಶಲ್ಯವನ್ನು ತೆಗೆದು ಹಾಕಿ ಬಳಿಕ ಹೇಳುವೆನು.

†ಕಂದ || ಅರಸೀ ಮರವೆಯೊಳಾನಂ
ದೊರಸಲನಾದರಣೆಗೈದ ನಿನ್ನಯ ಪಕ್ಷ್ಮಾಗ್ರಂ |
ತರಲಗ್ನ ಬಾಷ್ಪಬಿಂದುವ
ನೊರಸುತುಮಿಂದೆನ್ನ ದುಗುಡವಂ ಪರಿಹರಿಪೆಂ || ೧೮೮ ||

(ಎಂದು ಕಣ್ಣೀರನ್ನು ಒರಸುವನು)

ಶಕುಂ—(ರಾಜನಾಮಾಂಕಿತವಾದ ಉಂಗುರವನ್ನು ನೋಡಿ) ಆರ್ಯಪುತ್ರನೆ, ಇದು ಆ ಉಂಗುರವಲ್ಲವೇ ?

---

* ರಾಗ—ತೋಡಿ. ಆದಿತಾಳ.

ಕ್ಷಮಿಸು ನೀಂ ಪ್ರಾಣಸಖೀ | ರಮಣೀ ರಾಕೇಂದುಮುಖೀ | ಕ್ಷಮಿಸು || ಪ || ಅಮಮ ಮನದಿ ನಾಂ | ಭ್ರಮಿಸಿದ ಕಾರಣ | ಮಮತೆಯುಳಿದು ನಾಂ | ಮಾಡಿದ ತಪ್ಪ ಕ್ಷಮಿಸು || ಅ || ಆಹ ಅಂದೇನೆನಗೆ | ಮೋಹವಾಯ್ತೀಮತಿಗೆ || ಊಹಿಸಲರಿದಾ | ದ್ರೋಹವನೆಣಿಸದ | ಸ್ನೇಹ ವೆರಸು ಪತಿ | ಮೋಹ ಸುಶೀಲೆ || ೧ ||

† ರಾಗ—ಖರಹರಪ್ರಿಯ. ಆದಿತಾಳ.

ತಾಳು ತಾಳವನೀಪತಿ | ಶುಭಮತಿ || ಪ || ಬಾಲೆಯೊಳೀನೀ ಅನೌಚಿತಿ | ಪತಿ || ಅ || ಪತಿಯೆ ಕೇಳೆನ್ನ ದು | ಷ್ಕೃತಿ ನಿನಗಂದು ವಿ | ಸ್ಮೃತಿಯನು ತಾನುಂಟು ಮಾಡಿತು ಪತಿ || ೧ || ದೈನ್ಯವಿದೇತಕೆ | ಮಾನ್ಯನೇ ನಿನಗೆ ನಾ | ನನ್ಯಳೆ ಕಾರುಣ್ಯವಾರಿಧೀಪತೀ || ೨ || ಇಂತು ದಯಾಳು ನೀ | ನಂತಾಗಲು ನಾ ನೋಂತುದನೇನೆಂದು ಬಣ್ಣಿಪೆ ಪತೀ || ೩ ||

† ರಾಗ—ಪಂತುವರಾಳಿ. ರೂಪಕತಾಳ.

ತರುಣೀ ತಾಳು ತಾ | ಳೊರೆಯುವೆನೆನ್ನೀ | ಪರಿತಾಪವನು ಪರಿ | ಹರಿಸಿಕೊಂಡ ಮೇಲೆ || ೧ || ಮರವೆಯಿಂ ಮೊದಲು ನಾ | ನೊರಸದೀ ಕಣ್ಣೀರ | ನೊರಸೀಗಲಾದರೂ ಪರಿತಾಪ ಗಳೆವೆನು || ೨ ||

ರಾಜಂ—ಹೌದು.

ಶಕುಂ—ಆರ್ಯಪುತ್ರನಿಗೆ ನಂಬಿಕೆಯನ್ನುಂಟುಮಾಡುವ ಕಾಲದಲ್ಲಿ ಇದು ನನಗೆ ದೊರೆಯದೆ ಕೆಡುಕುಮಾಡಿತು.

*ರಾಜಂ—ಹಾಗಾದರೆ ಪುನಶ್ಚ ಋತುಸಂಬಂಧಕ್ಕೆ ಗುರುತಾಗಿ ಒಳ್ಳಿಯ ಕುಸುಮವನ್ನು ಪಡೆಯುವಂತೆ ನೀನು ಈ ಉಂಗುರವನ್ನು ಧರಿಸಿಕೊ.

ಶಕುಂ—ಇದರಲ್ಲಿ ನನಗೆ ವಿಶ್ವಾಸವಿಲ್ಲ. ಆರ್ಯಪುತ್ರನೇ ಇದನ್ನು ಧರಿಸಿಕೊಳ್ಳಬೇಕು.

(ಮಾತಲಿ ಪ್ರವೇಶಿಸುವನು)

ಮಾತಲಿ—ಎಲೈ ಆಯುಷ್ಮಂತನೆ, ದೈವಯೋಗದಿಂದ ಧರ್ಮಪತ್ನಿಯನ್ನು ಕೂಡಿದುದರಿಂದಲೂ ಪುತ್ರನ ಮುಖವನ್ನು ನೋಡಿದುದರಿಂದಲೂ ಉಂಟಾದ ಸಂತೋಷದಿಂದ ನೀನು ವರ್ಧಿಸುವೆಯಾ ?

ರಾಜಂ—ಸನ್ಮಿತ್ರನಾದ ನಿನ್ನ ದೆಸೆಯಿಂದ ನನ್ನ ಮನೋರಥವು ಸರಸವಾಗಿ ಸಫಲವಾಯಿತು. ಮಾತಲಿಯೆ ಈ ನನ್ನ ಪ್ರಯೋಜನವು ಇಂದ್ರನಿಗೆ ತಿಳಿಯಲಿಲ್ಲವಲ್ಲಾ.

ಮಾತಲಿ—(ನಗೆಯಿಂದ ಕೂಡಿ) ದೇವತೆಗಳಿಗೆ ತಿಳಿಯದುದು ಯಾವುದು ತಾನೆ ಉಂಟು ? ಎಲೈ ಆಯುಷ್ಮಂತನೆ, ನಡೆ ನಡೆ. ಪೂಜ್ಯರಾದ ಮಾರೀಚ ಮುನಿಗಳು ನಿನಗೆ ದರ್ಶನವನ್ನು ಕೊಡುವರು.

ರಾಜಂ—ಎಲೆ ಶಕುಂತಳೆ, ಪುತ್ರನನ್ನು ಎತ್ತಿಕೊ. ನಿನ್ನೊಡನೆ ಪೂಜ್ಯರನ್ನು ನೋಡಲಿಚ್ಛೈಸುವೆನು.

ಶಕುಂ—ಆರ್ಯಪುತ್ರನೊಡನೆ ಗುರುಸನ್ನಿಧಿಗೆ ಬರುವುದಕ್ಕೆ ಲಜ್ಜಿಪಡುವೆನು.

ರಾಜಂ—ಸಾಕು ನಾಚಿಕೊಳ್ಳುವುದೇಕೆ ? ಅಭ್ಯುದಯಕಾಲದಲ್ಲಿ ಹೀಗೇ ನಡೆದುಕೊಳ್ಳಬೇಕು ; ಬಾ ಬಾ.

(ಎಲ್ಲರೂ ಹೋಗುವರು)

(ಅನಂತರದಲ್ಲಿ ಅದಿತಿಯೊಡನೆ ಪೀಠಗತರಾಗಿ ಮಾರೀಚಮುನಿಗಳು ಪ್ರವೇಶಿಸುವರು)

---

ರಾಗ—ಹಿಂದೂಸ್ಥಾನಿ ಕಾಪಿ. ಛಾಪುತಾಳ.

ಬೇಸರಿಸಬೇಡವೆ || ಪ || ಕೈಸೇರಿದುದೆನಗೀ ಸುಖವಿದರಿಂ || ಅ || ಅಂಗನೆ ಕೇಳೀಯುಂಗರ ಸನ್ನಯ | ಸಂಗತಿವೇಳ್ವುದು | ಮಂಗಳಮಯಿ || ೧ || ಪೊಸಸುಗ್ಗಿಗೆ ಲತೆ | ಕುಸುಮವ ತಳೆದಪೊ | ಲುಸುರುವುದೇನಿದನಸಿಯಳೆ ತಳೆ || ೨ || ಉಂಗುರವಿದ ನೀ | ನಂಗುಲಿಗಿಡುತಲಿ | ಸಿಂಗರಿಸುವುದು ಕು | ರಂಗಾಂಬಕಿ | ಬೇಸರಿಸ || ೩ ||

ಮಾರೀಚ—ಎಲೆ ದಾಕ್ಷಾಯಣಿಯೆ,

ಕಂದ || ದನುಜರ ಗೆಲೆ ತನ್ನಯ ಧನು
ಮೊನೆಮುರಿಯದ ಪವಿಯನಿಂದಿರನ ಕೈದೊಡವೆಂ |
ದೆನಿಸಿದ ದುಷ್ಯಂತನೃಪಾ
ಲನಿವಂ ನಿನ್ನಯ ಸುತಂಗೆ ಸಮರಸಹಾಯಂ || ೧೮೯ ||

ದಾಕ್ಷಾಯಣಿ—ಇವನು ಮಹಾನುಭಾವನೆಂಬುದು ಆಕೃತಿಯಿಂದಲೇ ಎಣಿಸ ತಕ್ಕುದಾಗಿರುವುದು.

ಮಾತಲಿ—ಎಲೈ ಆಯುಷ್ಮಂತನೆ, ದೇವತೆಗಳಿಗೆ ತಾಯಿತಂದೆಗಳಾದ ಇವರು ಪುತ್ರವಾತ್ಸಲ್ಯವನ್ನು ಸೂಚಿಸುವ ಲೋಚನಗಳಿಂದ ನಿನ್ನನ್ನು ನೋಡುತ್ತಿರುವರು. ಆದುದರಿಂದ ಅವರ ಸಮೀಪವನ್ನು ಸೇರು.

ರಾಜಂ—ಎಲೈ ಮಾತಲಿಯೆ,

ವೃತ್ತ || ಕ್ರಮದಿಂದಂ ಷಣ್ಣೆರಳ್ಛೇದಮನೆ ತಳೆದ ತೇಜಸ್ಸಿಗಂ ಯಜ್ಞಭಾಗೋ
ತ್ತಮಭಾವಂಬೆತ್ತ ಲೋಕತ್ರಯದಧಿಪತಿಗಂ ಧಾತೃವಿಂಗಾದ್ಯನಪ್ಪಾ |
ಕಮಲಾಕ್ಷಂಗಂ ತಮರ್ ತಾಮೆನುತುಸಿರ್ವರದಾರಂ ಯಮೀಂದ್ರರ್ಕಳಾ ದ
ಕ್ಷಮರೀಚಿಪ್ರೋದ್ಭವರ್ ದಂಪತಿಗಳಿವರ್ಗಮೋರಂತರಂ ವಾಗ್ವರಂಗಂ ||

ಮಾತಲಿ—ಹೌದು.

ರಾಜಂ—(ತಲೆಯನ್ನು ತಗ್ಗಿಸಿ) ಇಂದ್ರಭೃತ್ಯನಾದ ದುಷ್ಯಂತನು ಇಬ್ಬರಿಗೂ ನಮಸ್ಕರಿಸುವನು. (ಎಂದು ನಮಸ್ಕಾರ ಮಾಡುವನು)

ಮಾರೀಚ—ಎಲೈ ವತ್ಸನೆ, ಬಹುಕಾಲ ಭೂಮಂಡಲವನ್ನು ಪಾಲಿಸು.

ದಾಕ್ಷಾಯಣಿ—ಎಲೈ ವತ್ಸನೆ, ಅಪ್ರತಿರಥನಾಗು.

ಶಕುಂ—ಪುತ್ರನೊಡನೆ ನಾನು ನಿಮ್ಮ ಪಾದಗಳಿಗೆ ವಂದಿಸುವೆನು.

ಮಾರೀಚ—ಎಲೆ ವತ್ಸೆ,

ಕಂದ || ಪತಿ ಸುರಪತಿಗೆ ಸಮಾನಂ
ಸುತಂ ಜಯಂತಂಗೆ ಸದೃಶನೆನಿಪಂ ನಿನಗಿ |
ನ್ನಿತರಾಶೀರ್ವಾದಂ ಸಮು
ಚಿತಮಲ್ತಾಶಚಿಗೆ ಸಾಟಿಯೆನೆ ನೀಂ ಬಾಳೌ || ೧೯೧ ||

ದಾಕ್ಷಾಯಣಿ—ಎಲೆ ಮಗಳೆ, ಪತಿಗೆ ಬಹುಮತೆಯಾಗಿ ಬಾಳು; ದೀರ್ಘಾಯುವಾದ ನಿನ್ನ ಪುತ್ರನು ಉಭಯಕುಲಾನಂದಕನಾಗಲಿ; ಕುಳಿತುಕೊಳ್ಳಿ.

(ಎಲ್ಲರೂ ಮಾರೀಚಮುನಿಗಳ ಸಮೀಪದಲ್ಲಿ ಕುಳಿತುಕೊಳ್ಳುವರು)

ಮಾರೀಚ—(ಒಬ್ಬೊಬ್ಬರನ್ನೂ ತೋರಿಸಿ)

ಕಂದ || ಸತಿಯಾದ ಶಕುಂತಳೆಯುಂ
ಸುತಗುಣನೆಂದೆನಿಪ ಪುತ್ರನುಂ ನೀನುಂ ಭೂ |
ಪತಿ ಪುಣ್ಯದೆ ಕೂಡಿದುದ
ಸ್ವಿತಮಾದಂತಾಯ್ತು ಭಕ್ತಿ ವಿತ್ತಂ ವಿಧಿಯುಂ || ೧೯೨ ||

ರಾಜಂ—ಎಲೈ ಪೂಜ್ಯರೆ, ತಮ್ಮ ದರ್ಶನಕ್ಕೆ ಮೊದಲೇ ನನ್ನ ಕೋರಿಕೆ ಕೈಗೂಡಿತು; ಆದುದರಿಂದ ತಮ್ಮ ಅನುಗ್ರಹವು ಅಪೂರ್ವವಾದದ್ದು. ತಾವೇ ನೋಡಿ:

ಕಂದ || ಸುಮಮುದಯಿಕುಂ ಮೊದಲ್ ಬಳಿ
ಕಮೆ ಫಲಮುದಯಿಸುಗುಮಿದಲೆ ಕಾರಣಕಾರ್ಯ |
ಕ್ರಮವಾರಯೆ ನಿಮ್ಮಯ ಪದ
ಕಮಲಾನುಗ್ರಹಕೆ ಮುನ್ನಮೇ ಸಂಪದಗಳ್ || ೧೯೩ ||

ಮಾತಲಿ—ಸೃಷ್ಟಿಕರ್ತರು ಹೀಗೆ ಪ್ರಸನ್ನರಾಗುವರು.

ರಾಜಂ—ಎಲೈ ಪೂಜ್ಯರೆ, ನಿಮ್ಮ ಆಜ್ಞಾಧಾರಿಣಿಯಾದ ಈಕೆಯನ್ನು ಗಾಂಧರ್ವವಿವಾಹದಿಂದ ಮದುವೆಯಾದೆನು. ಕೆಲವು ಕಾಲದ ಮೇಲೆ ಬಂಧುಗಳು ನನ್ನ ಸನ್ನಿಧಿಗೆ ಕರೆದುಕೊಂಡು ಬಂದಾಗ ಈಕೆಯನ್ನು ಮರವೆಯಿಂದ ತಿರಸ್ಕರಿಸಿ, ತಮಗೆ ಸಗೋತ್ರರಾದ ಕಣ್ವರಿಗೆ ಅಪರಾಧವನ್ನು ಮಾಡಿದೆನು. ಉಂಗುರವನ್ನು ಕಂಡಮೇಲೆ ಈಕೆಯನ್ನು ಪೂರ್ವದಲ್ಲಿ ನಾನು ಮದುವೆಯಾಗಿದ್ದೆನೆಂದರಿದೆನು. ಆದುದರಿಂದ ಇದು ನನಗೆ ಆಶ್ಚರ್ಯವಾಗಿ ಕಾಣುವುದು.

ಕಂದ || ಕರಿಯಿದಿರೊಳಗಿರ್ಪಂದದು
ಕರಿಯಲ್ಲೆಂದೈದಿದಂದು ಸಂಶಯಿಸುತ್ತುಂ |
ನಿರುಕಿಸಿ ಪಜ್ಜೆಯ ನಂಬುಗೆ
ವೆರೆದಂತಾಯ್ತೆನ್ನ ಮನದೊಳಾದ ವಿಕಾರಂ || ೧೯೪ ||

ಮಾರೀಚ—ಎಲೆ ವತ್ಸ, ಸಾಕು ಸಾಕು, ನಿನ್ನ ತಪ್ಪೆಂದೆಣಿಸಬೇಡ. ನಿನ್ನಲ್ಲಿ ಹಾಗೆ ಮರವೆಯುಂಟಾದದ್ದು ಸರಿಯಾದದ್ದೇ; ಕೇಳು—

ರಾಜಂ—ಅಪ್ಪಣೆಯಾಗಬೇಕು.

ಮಾರೀಚ—ಅಪ್ಸರಸ್ಸ್ತೀರ್ಥಾವತರಣದಿಂದ ನಿನ್ನ ಧಿಕ್ಕೃತಿಯಿಂದ ದುಃಖಿತೆಯಾದ ಶಕುಂತಳೆಯನ್ನು ಗ್ರಹಿಸಿಕೊಂಡು ಮೇನಕೆಯು ದಾಕ್ಷಾಯಣಿಯ ಸಮಿಪಕ್ಕೆ ಬಂದಾಗಲೇ ದೂರ್ವಾಸರ ಶಾಪದಿಂದ ಧರ್ಮಪತ್ನಿಯಾದ ಈ ತಪಸ್ವಿನಿಯನ್ನು ನೀನು ತಿರಸ್ಕರಿಸಿದೆಯೇ ಹೊರತು ಮತ್ತೆ ಬೇರೆ ಇಲ್ಲವೆಂದೂ, ಆ ಶಾಪವು ಉಂಗುರವನ್ನು ನೋಡಿದ ಕೂಡಲೆ ವಿಮೋಚನೆ ಹೊಂದುವುದೆಂದೂ ಧ್ಯಾನದಿಂದ ತಿಳಿದೆವು.

ರಾಜಂ—(ನಿಟ್ಟುಸಿರಿಂದ ಕೂಡಿ) ಈಗ ನಾನು ಅಪವಾದದಿಂದ ಬಿಡುಗಡೆಯನ್ನು ಹೊಂದಿದೆನು.

ಶಕುಂ—(ತನ್ನಲ್ಲಿ ತಾನು) ದೈವಯೋಗದಿಂದ ಆರ್ಯಪುತ್ರನು ನನ್ನನ್ನು ನಿಷ್ಕಾರಣವಾಗಿ ತೊರೆದವನಾಗಲಿಲ್ಲ. ಆಗ ನನಗೆ ನನ್ನ ಸ್ಮೃತಿಯೇ ಇರಲಿಲ್ಲ. ಅಥವಾ ವಿರಹಪರವಶೆಯಾಗಿದ್ದ ನನಗೆ ಶಾಪ ಬಂದಿರಬಹುದು. ಆದುದರಿಂದಲೇ ಸಖಿಯರು "ನಿನ್ನ ಪತಿಗೆ ಈ ಉಂಗುರವನ್ನು ತೋರಿಸಬೇಕು" ಎಂದು ಹೇಳಿದರು.

ಮಾರೀಚ—(ಶಕುಂತಳೆಯನ್ನು ನೋಡಿ) ಎಲೆ ವತ್ಸೆ, ಈಗ ನೀನು ಎಲ್ಲಾ ಅರ್ಥವನ್ನೂ ತಿಳಿದೆ; ಇನ್ನು ನಿನ್ನ ಪತಿಯಲ್ಲಿ ಕೋಪಗೊಳ್ಳಬೇಡ; ನೋಡು—

ವೃತ್ತ || ಶಾಪದೊಳಾದ ಬಲ್ಮರವೆಯಿಂದತಿಕರ್ಕಶಚಿತ್ತನಾದ ನಿ
ನ್ನೋಪನಿನಾಂತೆ ಧಿಕ್ಕೃತಿಯ ಮೇಣ್ ನೆನಪೊಂದಿದವಂಗೆ ಪೆರ್ಮೆವೆ |
ತ್ತೋಪಳೆನಿಪ್ಪ ನಿನ್ನಿಯಿದು ನಂದನೆ ಕೇಳು ಕಿಲುಂಬುಪತ್ತಿದಾ
ಕೈಪಿಡಿ ಛಾಯೆಯಂ ಪಿಡಿಗುಮೇಂ ಪಿಡಿಗುಂ ಪರಿಶುದ್ಧವಾಗೆ ತಾಂ ||

ರಾಜಂ—ಎಲೈ ಪೂಜ್ಯರೆ, ಈಕೆಯುಲ್ಲಿಯಲ್ಲವೆ ನನ್ನ ವಂಶಸ್ಥಿತಿಯು? (ಎಂದು ಪುತ್ರನ ಕೈಯನ್ನು ಹಿಡಿದುಕೊಳ್ಳುವನು)

ಮಾರೀಚ—ಹಾಗೇ ಸರಿ. ಈ ಬಾಲಕನು ಮುಂದೆ ಚಕ್ರವರ್ತಿಯಾಗುವನೆಂದು ತಿಳಿ.

ವೃತ್ತ || ಅಮರಾಧ್ವಂಬರೆಗಂ ಚರಿಪ್ಪ ರಥದಿಂದಂಭೋಧಿಯಂ ದಾಂಟಿ ವಿ
ಕ್ರಮದಿಂ ಮುಂತೆ ಜಯಿಪ್ಪನಪ್ರತಿರಥಂ ಸರ್ವೋರ್ವಿಯಂ ಸರ್ವಮಂ |
ದಮಿಸಿರ್ದಂತರದಿಲ್ಲಿ ಸರ್ವದಮನಂ ನಿನ್ನೀಕುಮಾರಂ ನೃಪೋ
ತ್ತಮ ಭೂರಕ್ಷಣದತ್ತಣಿಂ ಭರತನಾಮಂದಾಳ್ದು ತಾಂ ಬಾಳುವಂ ||

ರಾಜಂ—ಎಲೈ ಪೂಜ್ಯರೆ, ತಮ್ಮಿಂದ ಜಾತಕರ್ಮಾದಿಗಳಿಂದ ಅನುಗ್ರಹಿಸಲ್ಪಟ್ಟ ಈ ಬಾಲಕನಲ್ಲಿ ತಾವು ಅಷ್ಟಣೆ ಕೊಡಿಸಿದುದನ್ನೆಲ್ಲಾ ಅಭಿನಂದಿಸುವೆನು.

ದಾಕ್ಷಾಯಣಿ—ಪೂಜ್ಯರೆ, ಮಗಳ ಮನೋರಥಸಂಪತ್ತನ್ನು ಕಣ್ವರಿಗೆ ಪರಿಚಾರಕರ ಮುಖದಿಂದ ತಿಳಿಸಬೇಕು. ಮಗಳಲ್ಲಿ ವಾತ್ಸಲ್ಯವುಳ್ಳ ಮೇನಕೆಯಂತೂ ಇಲ್ಲಿಯೇ ನನ್ನ ಸೇವೆಯಲ್ಲಿರುವಳು.

ಶಕುಂ—(ತನ್ನಲ್ಲಿ ತಾನು) ಪೂಜ್ಯೆಯಾದ ದಾಕ್ಷಾಯಣಿ ಹೇಳಿದುದು ನನ್ನ ಕೋರಿಕೆಯೇ ಅಲ್ಲವೆ?

ಮಾರೀಚ—ಪೂಜ್ಯರಾದ ಕಣ್ವರು ತಪಃಪ್ರಭಾವದಿಂದ ಇದನ್ನೆಲ್ಲಾ ಬಲ್ಲರು.

ರಾಜಂ—ಆದುದರಿಂದಲೇ ಕಣ್ವರು ನನ್ನ ವಿಷಯದಲ್ಲಿ ಅತಿ ಕೋಪಿಗಳಾಗಲಿಲ್ಲ.

ಮಾರೀಚ—ಆದರೂ ಈ ಪ್ರಿಯವಾರ್ತೆಯನ್ನು ನಾವು ತಿಳಿಸಲೇಬೇಕು. ಯಾರಲ್ಲಿ ?

(ಶಿಷ್ಯನು ಪ್ರವೇಶಿಸಿ)

ಶಿಷ್ಯ—ಪೂಜ್ಯರೆ, ಇದೋ ಸಿದ್ಧನಾಗಿರುವೆನು.

ಮಾರೀಚ—ಎಲೈ ಗಾಲವನೆ, ಈಗಲೇ ಹೋಗಿ ಪುತ್ರವತಿಯಾದ ಶಕುಂತಳೆಯನ್ನು ಶಾಪವಿಮೋಚನೆಯಿಂದ ಸ್ಮರಣೆಯನ್ನು ಹೊಂದಿದ ದುಷ್ಯಂತನು ಪರಿಗ್ರಹಿಸಿದನೆಂದು ನಾವು ಹೇಳಿದೆವೆಂದು ಹೇಳು.

ಶಿಷ್ಯ—ಪೂಜ್ಯರ ಆಜ್ಞೆಯಂತಾಗಲಿ. (ಎಂದು ಹೊರಟುಹೋಗುವನು)

ಮಾರೀಚ—ಎಲೈ ವತ್ಸನೆ, ನೀನುಕೂಡ ಪತ್ನೀಪುತ್ರಸಮೇತನಾಗಿ ಮಿತ್ರನಾದ ಇಂದ್ರನ ರಥವನ್ನೇರಿ ನಿನ್ನ ರಾಜಧಾನಿಗೆ ಹೊರಡುವನಾಗು.

ರಾಜ—ಪೂಜ್ಯರ ಆಜ್ಞೆಯಂತಾಗಲಿ.

ಮಾರೀಚ—(ರಾಜನನ್ನು ನೋಡಿ)

ವೃತ್ತ || ಧರಣೀನಾಥನೆ ನಿನ್ನ ದೇಶಗಳೊಳಿಂದ್ರಂ ಮಾಳ್ಕೆ ಸದ್ವೃಷ್ಟಿಯಂ
ಸುರರಂ ನೀನುಮುದಾರಯಾಗಮುಖದಿಂ ಸಂತರ್ಪಿಸಿಂತೀನರಾ |
ಮರಲೋಕಾವನ ಕೀರ್ತನೀಯಗಳೆನಿಪ್ಪನ್ಯೋನ್ಯಕೃತ್ಯಂಗಳಿಂ
ಮರಳಲ್ ನೂರುಯುಗಂ ದಿನಂಗಳೆದು ನೀವಾನಂದದಿಂ ಬಾಳಿರೈ ||

ರಾಜಂ—ಎಲೈ ಪೂಜ್ಯರೆ, ಶ್ರೇಯಸ್ಸಿನ ವಿಷಯದಲ್ಲಿ ನನ್ನ ಶಕ್ತ್ಯನುಸಾರವಾಗಿ ಪ್ರಯತ್ನಿಸುವೆನು.

ಮಾರೀಚ—ಎಲೈ ವತ್ಸನೆ, ನಿನಗೆ ಇನ್ನೇನು ಪ್ರಿಯವನ್ನುಂಟುಮಾಡಲಿ ?

ರಾಜಂ—ಇದಕ್ಕಿಂತಲೂ ಅಧಿಕವಾದ ಪ್ರಿಯವು ಮತ್ತೊಂದುಂಟೆ ? ಪೂಜ್ಯರು ಅನುಗ್ರಹಿಸುವುದಾದರೆ ಈ ಭರತವಾಕ್ಯವು ನೆರವೇರಿಸಲ್ಪಡಲಿ :

ಕಂದ || ಪ್ರಕೃತಿಹಿತಾರ್ಥಂ ಕ್ಷಿತಿಪಾ
ಲಕರುದ್ಯೋಗಿಸುಗೆ ಪೂಜ್ಯಮೆನಿಸುಗೆ ಜಗದೊಳ್ |
ಸುಕವಿಗಳ ಸೂಕ್ತಿ ವಿಶ್ವಾ
ಧಿಕನಿಹಪರಸುಖವನೆಮಗವಿೂಗೆ ಮಹೇಶಂ || ೧೯೮ ||

(ಎಂದೆಲ್ಲರೂ ಹೊರಟು ಹೋಗುವರು)

ಕಂದ || ನುತಗುಣಯುತ ಚಾಮಕ್ಷಿತಿ
ಪತಿಸನ್ನಿಧಿಸಚಿವವರನೃಸಿಂಹಾರ್ಯೋತ್ತಾ |
ಹಿತಬಸವಶಾಸ್ತ್ರಿ ತಾಂ ಸಂ |
ಸ್ಕೃತಶಾಕುಂತಳಮನಿಂತು ಕನ್ನಡಿಸಿರ್ಪಂ || ೧೯೯ ||

---

ರಾಗ—ಜಲಾಬು. ಆದಿತಾಳ.

ಶ್ರೀಕರಾದ್ರಿತನ | ಯೈಕವಿಹಾರ | ಶ್ರೀಕಂಠೇಶ ಕೃಪಾಕೂಪಾರ || ಪ || ಖಂಡಿತಕಾಲ ಮೃ | ಕಂಡುಜಪಾಲಾ | ಖಂಡಲಬಾಲಾ | ಕಾಂಡದಲೀಲ || ೧ || ಧೃತಶಶಿಖಂಡ | ಜಿತಸುಮಕಾಂಡ | ವಿತರಣಶೌಂಡ | ಭೃತಜಗದಂಡ || ೨ || ಪಾಲಯ ಚಾಮನೃ | ಪಾಲಕಮನುಕಂ ಪಾಲಯ ಸದವನ | ಶೀಲಮಹೇಶ || ೩ ||

ಸಂಪೂರ್ಣಂ

---

## ಬಸವಪ್ಪಶಾಸ್ತ್ರಿ ಗ್ರಂಥಮಾಲೆಯಲ್ಲಿ ದೊರೆಯುವ ಪುಸ್ತಕಗಳು

---

| | | | ರೂ. | ಆ. | ಪೈ. |
|---|---|---|---|---|---|
| ಕರ್ಣಾಟಕ ಶಾಕುಂತಲ ನಾಟಕ | .... | .... | ೧ | ೪ | ೦ |
| ಕರ್ಣಾಟಕ ರತ್ನಾವಳಿ ನಾಟಕ | .... | .... | ೦ | ೧೨ | ೦ |
| ಕನ್ನಡ ಭರ್ತೃಹರಿ ಸುಭಾಷಿತ ಶತಕತ್ರಯ | .... | .... | ೦ | ೬ | ೦ |

ವಿಳಾಸ :—

**ಎಂ. ಮಹದೇವಶಾಸ್ತ್ರಿ,**
ಕೇರಳಾಪುರ, ಅರಕಲಗೂಡು ತಾಲ್ಲೋಕು,
ಹಾಸನ ಡಿಸ್ಟ್ರಿಕ್ಟ್

PRINTED IN INDIA
AT THE WESLEY PRESS AND PUBLISHING HOUSE, MYSOR